# ನನ್ನ ಜೀವನಸ್ಮೃತಿಗಳು

## (ಪೂರ್ವರಂಗ)



ಶ್ರೀ ಆಲೂರ ವೆಂಕಟರಾಯರು
ಬಿ ಎ, ಎಲ್‌ಎಲ್. ಬಿ.,
ಧಾರವಾಡ

ಬೆಲೆ ಹನ್ನೆರಡಾಣೆ

ಮುದ್ರಕರು:
ಶಿವಪ್ಪ ಫಕೀರಪ್ಪ ಹರಸೆ,
ಕಲಾಸಿಂಧು ಮುದ್ರಣಾಲಯ,
ಧಾರವಾಡ

ಶ್ರೀ. ಆಲೂರ ವೆಂಕಟರಾಯರ
ಷಷ್ಟ್ಯಬ್ದಿಪೂರ್ತಿ ಶಾಂತಿಸಮಾರಂಭಕ್ಕಾಗಿ
ಜಯಕರ್ನಾಟಕದಿಂದ ಪುನರ್ಮುದ್ರಿತ
೧೨-೭-೧೯೪೦

ಪ್ರಕಾಶಕರು
ಜೋಗಾಪಿ ರಾಮಚಂದ್ರರಾಯರು,
ಜಯಕರ್ನಾಟಕ ಕಾರ್ಯಾಲಯ,
ಧಾರವಾಡ

# ಪ್ರಸ್ತಾವನೆ

ಇದು 'ನನ್ನ ಜೀವನಸ್ಮೃತಿಗಳು' ಎಂಬ ಗ್ರಂಥದ ಒಂದನೆಯ ಭಾಗವು. ಇದರಲ್ಲಿ ೧೮೮೦ರಿಂದ ೧೯೦೫ರ ವರೆಗಿನ ನನ್ನ ಜೀವನಸ್ಮೃತಿಗಳು ಬಂದಿವೆ. ಈ ಸ್ಮೃತಿಗಳನ್ನು ನಾನು ಏಕೆ ಬರೆಯಬೇಕಾಯಿತೆಂಬುದನ್ನೂ ಅವುಗಳನ್ನು ಕೊಡುವುದರಲ್ಲಿ ನನ್ನ ಉದ್ದೇಶವು ಏನಿರುತ್ತದೆಂಬುದನ್ನೂ ನಾನು ಈ ಗ್ರಂಥದ ಒಳಭಾಗದಲ್ಲಿಯೇ ವಿಸ್ತಾರವಾಗಿ ಹೇಳಿರುವುದರಿಂದ ಆ ಬಗ್ಗೆ ಇಲ್ಲಿ ಹೇಳುವುದು ಬೇಡ. ಅಲ್ಲಿ ಹೇಳಿದಂತೆ, ಈ ಸ್ಮೃತಿಗಳು ಕರ್ನಾಟಕದ ಆಗಿನ ಕಾಲದ ಸಾರ್ವಜನಿಕ ಇತಿಹಾಸವನ್ನು ವಾಚಕರ ಕಣ್ಣ ಮುಂದೆ ತಂದು, ತರುಣರಿಗೆ ಬೋಧಪ್ರದವಾಗುವವೆಂದು ನನಗೆ ಆಶೆಯಿದೆ. ಎಲ್ಲ ಸ್ಮೃತಿಗಳು ಮುಗಿದ ಬಳಿಕ ವಿಸ್ತಾರವಾದ ಪ್ರಸ್ತಾವನೆ ಬರೆಯುವೆ.

ಧಾರವಾಡ
೧೨-೭-೧೯೪೦

# ವಿಷಯಾನುಕ್ರಮಣಿಕೆ

ನವಲಗುಂದದಲ್ಲಿ ನನ್ನ ತಂದೆಯವರು ಸಂಸ್ಕೃತ ಪಾಠ
ಶಾಲೆ ಸ್ಥಾಪಿಸಿದ್ದು (ಪು. ೨೩); ನವಲಗುಂದದ ಲಾಲಗಡಿ
ಗುಡಿಯ ಬಗ್ಗೆ ನನ್ನ ಸ್ಮೃತಿ (ಪು. ೨೪); ದೆವ್ವಭೂತಗಳ
ಬಗ್ಗೆ ನನ್ನ ತಂದೆಯ ಮತ್ತು ನನ್ನ ಸ್ಮೃತಿಗಳು (ಪು.
೨೫), ನನ್ನ ನಾಲಿಗೆಯ ದೋಷಕ್ಕೆ ಮೂಗಿನ ದೋಷ
ಕಾರಣ (ಪು. ೨೮), ಡೆಮಾಸ್ಥಿನೀಸನ ಉದಾಹರಣೆ ಸರಿ
ಯಲ್ಲ (ಪು. ೩೦), ಹಾನಗಲ್ಲಿನ ಸ್ಮೃತಿ-ಹೋಳೀ ಪದಗಳ
ಬಗ್ಗೆ (ಪು. ೩೧); ಬಾಲ್ಯದಲ್ಲಿಯ ನನ್ನ ಅಹಂಕಾರ
(ಪು. ೩೧), ವರದಕ್ಷಿಣೆಯ ಬಗ್ಗೆ ತಂದೆಯ ಅಭಿಪ್ರಾಯ
(ಪು. ೩೨); ಮದುವೆಗಳಲ್ಲಿಯ ಜಗಳದ ಬಗ್ಗೆ ನನ್ನ
ತಂದೆಯ ತಿರಸ್ಕಾರ (ಪು. ೩೪), ೧೮೯೬ರಲ್ಲಿ ನಾನು
ಸಂಸ್ಕೃತ ನಾಟಕ ಆಡಿದ್ದು (ಪು. ೩೫); ನನ್ನ ತಂದೆಯ
ವಾಚನಾಭಿರುಚಿ ಮತ್ತು ಪರೋಪಕಾರದ ಕೃತ್ಯಗಳು
(ಪು. ೩೭); ೧೮೯೫-೧೮೯೬ರಲ್ಲಿ ಧಾರವಾಡದಲ್ಲಿಯ ಚಟು
ವಟಿಕೆಗಳು (ಪು. ೩೮); ೧೮೯೬ರಲ್ಲಿ ನಾನು 'ಗಜಾನನ
ಸ್ತವನ'ದ ಪ್ರಕಾಶಕನು ಆ ಬಗ್ಗೆ ಒಂದು ಚಮತ್ಕಾರದ
ಸ್ಮೃತಿ (ಪು. ೩೮); ನನ್ನ ತಂದೆಯ ಮಾನೀ ಸ್ವಭಾವದ
ಸ್ಮೃತಿ (ಪು. ೪೧); ಅವರ ಚಾಣಾಕ್ಷತನ (ಪು. ೪೨);
ಹಾಯಸ್ಕೂಲಿನ ನನ್ನ ಅನುಭವ (ಪು. ೪೩); ಆಗಿನ
ಸಾರ್ವಜನಿಕ ವಾತಾವರಣ (ಪು. ೪೭); ಪ್ಲೇಗು ಮತ್ತು
ದುಷ್ಕಾಳಗಳ ಹಾವಳಿ (ಪು. ೪೮); ಸಾರ್ವಜನಿಕ ಚಟು
ವಟಿಕೆಗಳು (ಪು. ೪೯); ಧಾರವಾಡದಲ್ಲಿ ಮೊದಲನೆಯ
ಸರ್ಚವಾರಂಟು (ಪು. ೫೧); ಧಾರವಾಡದ ಚಟುವಟಿಕೆ
ಗಳು (ಪು. ೫೧); ಧಾರವಾಡವು ಮೊದಲಿನಿಂದಲೂ ಸ್ವಂತ

ಮತ್ತು ಸ್ವತಂತ್ರ ಸಂಸ್ಥೆಗಳ ಉಗಮಸ್ಥಾನವು ( ಪು ೫೩ );

**೪ನೆಯ ಪ್ರಕರಣ:—ನನ್ನ ಪ್ರೌಢವಿದ್ಯಾರ್ಥಿದಸೆ,**

೧೮೯೮-೧೯೦೫ (**ಪು.** ೫೬-೧೦೭)

**ಒಳವಿಷಯಗಳು.**-ನನ್ನ ಬಾಲ್ಯದ ಚಟುವಟಿಕೆಗಳಿಗೂ ಮುಂದಿನ ಚಟುವಟಿಕೆಗಳಿಗೂ ಭೇದ ( ಪು ೫೬ ); ಕಾಲೇಜುಗಳು ಗುರುಕುಲಗಳಾದರೂ, ದೇವರ ಬಾಗಿಲು ಮುಚ್ಚಿದ ದೇವಾಲಯಗಳು ಅವು ( ಪು ೫೭ ), ಮನುಷ್ಯನು ಮುಕ್ಕಣ್ಣನು ( ಪು ೫೮ ), ನನಗೆ ಆತ್ಮವಿಶ್ವಾಸ ಕಡಿಮೆ ಇದ್ದ ಬಗ್ಗೆ ಸ್ಮೃತಿ ( ಪು ೫೯ ); ೧೮೯೮ರಲ್ಲಿ ನನ್ನ ಅಜ್ಞಾತವಾಸ ಮತ್ತು ಆತ್ಮಗತವಿಚಾರ ( ಪು. ೬೦ ); ೧೮೯೮ರಲ್ಲಿ ನಾನು ಮ್ಯಾಕ್ಸಮ್ಯೂಲರನಿಗೆ ಪತ್ರ ಬರೆದದ್ದು ( ಪು ೬೧ ); ನನ್ನ ಮೊದಲನೆಯ ಗ್ರಂಥಲೇಖನ, ಅದಕ್ಕೆ ತಂದೆಯವರ ಪ್ರೇರಣೆ ಕಾರಣ (ಪು ೬೨ ); ನಾನು ಮುಂಬಯಿಯಲ್ಲಿ ಪರೀಕ್ಷೆಗೆ ಕುಳಿತಾಗಿನ ಒಂದು ಸೋಜಿಗದ ಸ್ಮೃತಿ ( ಪು ೬೫ ); ನನ್ನ ತಂದೆಯವರು ಕರ್ಮಠರಲ್ಲ; ಸುಧಾರಕರೂ ಅಲ್ಲ ( ಪು ೬೭ ), ಮ್ಯೂರಸಾಹೇಬರ ವಿಲಕ್ಷಣ ನಿಯಮಿತತನ ( ಪು ೬೭ ); ಮಧ್ವಸಿದ್ಧಾಂತೋನ್ನಾಹಿನೀ ಮತ್ತು ಮಧ್ವಸಿದ್ಧಾಂತೋತ್ತೇಜಕ ಸಭೆಗಳು ( ಪು ೬೮ ); ನವಲಗುಂದದ ವಾಙ್ಮಯ ವಾತಾವರಣ ( ಪು. ೬೯. ); ನವಲಗುಂದದ ಭಜನಾ ಸಂಭ್ರಮ ( ಪು. ೭೧ ); ನನ್ನ ತಂದೆಯವರ ಪ್ರಾಮಾಣಿಕತನದ ಬಗ್ಗೆ ಸ್ಮೃತಿಗಳು ( ಪು. ೭೧ ); ನನ್ನ ತಾಯಿಯೂ ಅಂಕಲೇಕರ ರುಕ್ಮಿಣಿಬಾಯಿಯೂ ( ಪು. ೭೩ ); ನಾನು ಡೆಕ್ಕನ್ ಕಾಲೇಜಕ್ಕೆ ಹೋಗದಿದ್ದುದರ ಕಾರಣ ( ಪು. ೭೩ ); ಕಾಲೇಜವ

ಜಗತ್ತು ಭಿನ್ನವಾದ ಜಗತ್ತು (ಪು ೭೫); ಸಾದಾತನದಿಂದ ಇರುವುದಕ್ಕೆ ನನ್ನ ಪ್ರಯತ್ನ (ಪು ೭೫), ನಾ. ಗೋಖಲೆಯವರ ರಾಷ್ಟ್ರೀಯ ಉಡುಪು, ನನ್ನ ಮೇಲೆ ಅದರ ಪರಿಣಾಮ (ಪು ೭೭), ಸಾರ್ವಜನಿಕ ವಾತಾವರಣ (ಪು. ೭೭); ಪ್ಲೇಗು ಮತ್ತು ಮುಷ್ಕಾಂಗಳ ಹಾವಳಿ (ಪು. ೭೮), ಧಾರವಾಡದಲ್ಲಿ ಪ್ಲೇಗಪ್ರಲಿ ಜುಚ್ಚುವ ವಿರುದ್ಧ ಚಳವಳಿ (ಪು ೭೯), ೧೯೦೦ರಲ್ಲಿಯ ಚಳವಳಿಗಳು (ಪು. ೮೦); ವಿದ್ಯಾರ್ಥಿಗಳಿಗೆ ರಾಜಕೀಯ ಸಭೆಗಳಿಗೆ ಹೋಗಲಿಕ್ಕೆ ಪ್ರತಿಬಂಧಕ ಹುಕುಂ (ಪು ೮೦), ೧೯೦೧ರಲ್ಲಿ ಲೋ ಟಿಳಕರ ವಿರುದ್ಧ 'ತಾಯಿಮಹಾರಾಜ'ರ ಖಟ್ಲೆ (ಪು ೮೧), ಆಗಿನ ಸಾರ್ವಜನಿಕ ಚಳವಳಿಗಳು (ಪು ೮೩), ೧೮೯೯ರಲ್ಲಿ ನಾನು ಸಂಪಾದಕನಾಗಲು ಸಂಕಲ್ಪಮಾಡಿದ್ದು (ಪು ೮೫), ಫರ್ಗ್ಯೂಸನ್ ಕಾಲೇಜಿನ ನನ್ನ ಪ್ರೊಫೆಸರರು (ಪು ೮೬); ಪ್ರೊ ಭಾಟೆಯವರ ಪುನರ್ವಿವಾಹ (ಪು ೮೭), ವಿನಾಯಕ ದಾಮೋದರ ಸಾವರಕರರೊಡನೆ ನನ್ನ ಸಖ್ಯ (ಪು ೮೮); ೧೯೦೨ರಲ್ಲಿ ಸಿಂಹಗಡದಲ್ಲಿ ನನಗೆ ಲೋ ಟಿಳಕರ ಪ್ರಥಮ ಭೆಟ್ಟಿ (ಪು ೮೯), ೧೯೦೩ರಲ್ಲಿ ನನ್ನ ಮೊದಲನೆಯ ಹೆಂಡತಿಯ ಮರಣ ಸ್ಮೃತಿ (ಪು ೯೧); ನನ್ನ ಅರಭರವಸೆಯ ಸ್ವಭಾವದ ಉದಾಹರಣೆ (ಪು ೯೨); ನಾರಾಯಣರಾವ ಜೋಶಿ ಇವರಿಗೆ ಸಂಬಂಧಿಸಿದ ಒಂದು ವಿಚಿತ್ರ ಸ್ಮೃತಿ (ಪು. ೯೩), ನಾ ಗೋಖಲೆಯವರ ಉಪದೇಶ, ನನ್ನ ಮೇಲೆ ಅದರ ಪರಿಣಾಮ (ಪು. ೯೪); ಹರಕಾರೆಯವರ ಬಗ್ಗೆ ನಗೆ ಬರುವ ಒಂದು ಸ್ಮೃತಿ (ಪು. ೯೫); 'ವೆಗಣ್ಣ'ನೆಂಬ ಹುಡುಗನ ಒಂದು ವಿಚಿತ್ರ ಶಕ್ತಿ (ಪು. ೯೬);

೧೯೦೧ರಲ್ಲಿ ಆದ್ಯರೇಷ ದಾಸಾಚಾರ್ಯರ ಪುನರ್ವಿವಾಹ ಸ್ಮೃತಿ (ಪು ೯೭); ಸರಕಾರೀ ನವಕರಿಯ ಬಗ್ಗೆ ನನ್ನ ತಂದೆಯ ತಿರಸ್ಕಾರ, ಸ್ವತಂತ್ರವೃತ್ತಿಯ ಬಗ್ಗೆ ಅವರ ವಿಚಾರ ( ಪು. ೯೯), ನನ್ನ ತಂದೆಯವರು ಸೂಕ್ಷ್ಮ ಲೆಕ್ಕ ಕೇಳುವವರಲ್ಲ (ಪು ೧೦೧); ಇಂಡಿಯಲ್ಲಿ ಕತ್ತಿಗಳ ಆಟಗು ಗಳ ಮೇಲಿನ ಅದ್ಭುತ ಕಸರತ್ತು ( ಪು ೧೦೧ ); ಇತ್ತ ಕಡೆಯ ಚಟುವಟಿಕೆಗಳು ( ಪು. ೧೦೨); ಕರ್ನಾಟಕತ್ವದ ಉದಯ ( ಪು ೧೦೪), ಕನ್ನಡಿಗರು ಮುರಾರೀ ನಾಟಕ ಗಳಲ್ಲಿ ಮುಖ್ಯ ಪಾತ್ರವಹಿಸಿದುದು ( ಪು. ೧೦೬ ).

## ೫ ನೆಯ ಪ್ರಕರಣ:—ನನ್ನ ಹಿಂದಿನ ಜೀವನದ ಹಿನ್ನೋಟ (ಪು. ೧೦೭-೧೧೪)

**ಒಳವಿಷಯುಗಳು:-** ನನ್ನ ಜೀವನಸ್ಮೃತಿಗಳಿಂದೇನು ಪ್ರಯೋಜನ? ಎಂಬುದಕ್ಕೆ ಉತ್ತರ (ಪು. ೧೦೭), ಕರ್ನಾಟಕದ ವಿಶೇಷತಃಧಾರವಾಡದ ಆಗಿನ ಕೀಳು ಸ್ಥಿತಿ (ಪು ೧೦೯); ವಕೀಲನಾಗಲು ಬಂದಾಗ ನನ್ನಲ್ಲಿ ಉದಾತ್ತ ವಾದ ನಿಶ್ಚಿತಧ್ಯೇಯಗಳಿರಲಿಲ್ಲ (ಪು. ೧೧೩).

## ೬ನೆಯ ಪ್ರಕರಣ:—ನನ್ನ ಜೀವನಪ್ರವಾಹವು ಉತ್ತರವಾಹಿನಿಯಾಯಿತು, ೧೯೦೫-೧೯೦೬ (ಪು. ೧೧೫-೧೨೪)

**ಒಳವಿಷಯುಗಳು:-** ಮನುಷ್ಯನ ಜೀವಿತದಲ್ಲಿ ಒಮ್ಮೊಮ್ಮೆ ಕ್ರಾಂತಿಕಾಲವು ಬರುತ್ತದೆ. (ಪು. ೧೧೫);

೧೯೦೫-೬ ಇಸ್ವಿಯು ಹಾಗೆ ನನ್ನ ಜೀವಿತದ ಕ್ರಾಂತಿ ಕಾಲವು (ಪು.೧೧೭),ಆಗ ನಾನು ನನ್ನ ಆತ್ಮಜ್ಯೋತಿಯನ್ನು ಹೊತ್ತಿಸಿಕೊಂಡೆ (ಪು. ೧೧೮) ಆ ನನ್ನ ಮಿಣಿಮಿಣಿ ಬೆಳಕಿನಲ್ಲಿ ಕರ್ನಾಟಕದೇವಿಯ ಮೂರ್ತಿಯನ್ನು ಕಂಡೆ (ಪು ೧೧೯); ಕರ್ನಾಟಕದಲ್ಲಿ ನನ್ನ ಭರತಖಂಡವು ಅಡಗಿದೆ, ನನ್ನ ವಿಶ್ವವು ಅಡಗಿದೆ (ಪು ೧೨೦); ಕರ್ನಾಟಕದ ಸರ್ವಾಂಗೀಣ ಉನ್ನತಿ ಎಂಬುದು ಕರ್ನಾಟಕದ ಆಧಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕ ಈ ಮೂರೂ ಧ್ಯೇಯಗಳ ಮಿಶ್ರಣ (ಪು. ೧೨೦); ನನ್ನ ಜೀವನಪ್ರವಾಹವು ಉತ್ತರವಾಹಿನಿಯಾಗಿ ಇಂಥ ದಿವಸವೇ ಹರಿಯಿತೆಂಬುದನ್ನು ಹೇಳಲಾರೆ (ಪು ೧೨೧); ೪-೫-೧೯೦೫ ನೇ ದಿನವು ಅಂದರೆ, ಆನಿಗೊಂದಿ ದರ್ಶನವಾದ ದಿನವು ನನ್ನ ಜೀವನದಲ್ಲಿಯ ತಿರುಗಣಿ ಸ್ಟೇಶನ (Reversing Station) ಎಂದು ಹೇಳಬಹುದು (ಪು ೧೨೧); ಜೀವನವು ಉತ್ತರವಾಹಿನಿಯಾಗುವುದಕ್ಕೆ ಕಾರಣಗಳು (ಪು. ೧೨೩).

## ೭ನೆಯ ಪ್ರಕರಣ — ನನ್ನ ಜೀವನದಲ್ಲಿಯ ಕ್ರಾಂತಿಕಾಲ (ಪು. ೧೨೫-೧೩೬)

**ಒಳವಿಷಯಗಳು** - ವಂಗಭಂಗ ಚಳವಳಿಯ ಇತಿಹಾಸ (ಪು. ೧೨೫), ಈ ಚಳವಳಿಯ ಅಪ್ರತ್ಯಕ್ಷ ಪರಿಣಾಮ (ಪು.೧೨೫); ಆಗಿನ ಕಾಲದ ವಕೀಲರ ಸುಸ್ಥಿತಿ (ಪು. ೧೩೨); ನನ್ನ ಮೇಲೆ ಆದ ವಂಗಭಂಗದ ಸಾಮಾನ್ಯ ಪರಿಣಾಮ (ಪು. ೧೩೩); ವಂಗಭಂಗದಿಂದಾದ ವಿಶಿಷ್ಟ ಪರಿಣಾಮ (ಪು. ೧೩೪).

## ೮ನೆಯ ಪ್ರಕರಣ:- ನನ್ನ ಜೀವನದ ಧ್ಯೇಯ-ಧೋರಣೆಗಳು ನಿಶ್ಚಿತವಾದವು, ೧೯೦೫-೬

(ಪೃ. ೧೩೭-೧೫೧)

**ಒಳವಿಷಯಗಳು** - ಕರ್ನಾಟಕದ ಇತಿಹಾಸವನ್ನು ಅಭ್ಯಾಸಮಾಡುವದೊಂದು ನನ್ನ ಧ್ಯೇಯ (ಪು ೧೩೭), ನಾನು ರಾಷ್ಟ್ರೀಯನಾದೆನು (ಪು ೧೩೭), ರಾಷ್ಟ್ರೀಯತ್ವಕ್ಕೆ ಕರ್ನಾಟಕತ್ವದ ಸ್ವರೂಪವುಂಟಾಯಿತು (ಪು ೧೪೧); ಹೆಚ್ಚಿನ ಆಕಾಂಕ್ಷೆಯನ್ನು ಬಿಟ್ಟುಕೊಡಬೇಕಾಯಿತು (ಪು ೧೪೧), ಅದಕ್ಕೆ ಕಾರಣಗಳು (ಪು. ೧೪೨), ನನ್ನಲ್ಲಿ ಅನೇಕ ಧ್ಯೇಯಗಳ ತಿಕ್ಕಾಟ (ಪು. ೧೪೩), ಕೊನೆಗೆ ಸರ್ವವಿಷಯಗಳನ್ನೂ ಧ್ಯೇಯಗಳನ್ನಾಗಿ ಇಟ್ಟುಕೊಳ್ಳಲಿಕ್ಕೆ ಕಾರಣ (ಪು ೧೪೪), ನಾನು ಚಂಚಲ ವೃತ್ತಿಯವನೆಂಬ ಆಕ್ಷೇಪಕ್ಕೆ ಉತ್ತರ (ಪು ೧೪೫), ಕರ್ನಾಟಕಕ್ಕೆ ವಿವಿಧ ಅಂಗಗಳನ್ನು ಹುಟ್ಟಿಸುವವರು ಬೇಕಾಗಿದ್ದರು (ಪು ೧೪೬); ಮಳೆಯಾಗಿ ಹದಬಂದ ಹೊಲದಲ್ಲಿ ಬಿತ್ತುವುದು ನನ್ನ ಧೋರಣೆ (ಪು ೧೪೮), ನನಗೆ ಕರ್ನಾಟಕವು ಕಿರಣಕೇಂದ್ರ ಕಾಜು (Focussing Lens) (ಪು ೧೪೯); ೧ನೆಯ ಭಾಗ ಸಮಾಪ್ತಿ, ಮುಂದಿನಭಾಗದ ವಿವೇಚನ ಪದ್ಧತಿ (ಪು.೧೫೦).



# ನನ್ನ ಜೀವನಸ್ಮೃತಿಗಳು

“ನಾನು ಕರ್ತನಲ್ಲ, ಕರ್ತಾ [illegible]”
“ಸಕಲ [illegible]”

ಪುರಂದರದಾಸರು

## ೧ನೆಯ ಪ್ರಕರಣ

## ನನ್ನ ನುಡಿಗಳಿಗೆ ನನ್ನದೇ ಮುನ್ನುಡಿ

ಜಯಕರ್ನಾಟಕದ ಸಂಪಾದಕರು, ಬರುವ ವಿಕ್ರಮ ಸಂವತ್ಸರದ ಆಷಾಢ ಶುದ್ಧ ಪಂಚಮಿಗೆ ನನಗೆ ೬೦ ವರುಷಗಳು ತುಂಬುವುದರಿಂದ, ಆಗ ನನ್ನ ಷಷ್ಟ್ಯಬ್ದಿ ಪೂರ್ತಿಯ ಹಬ್ಬವನ್ನು ಜರುಗಿಸುವ ನಿಮಿತ್ತದಿಂದ, ನನಗೆ ನನ್ನ ಜೀವನ ಸ್ಮೃತಿಗಳ ಲೇಖನಮಾಲೆಯನ್ನು ಬರೆದುಕೊಡಲಿಕ್ಕೆ ಕೇಳಿದರು. ಅವರು ಕೃತಜ್ಞತಾಬುದ್ಧಿಯಿಂದ ಕೇಳಿದುದಕ್ಕೆ ನಾನು ಒಲ್ಲೆನ್ನಲಾರದೆ, ದಾಕ್ಷಿಣ್ಯಕ್ಕೆ ಒಳಪಟ್ಟು 'ಹೂಂ' ಎಂದು ಒಪ್ಪಿಕೊಂಡದ್ದೇನೋ ಆಯಿತು ಆದರೆ ಮುಂದೆ ವಿಚಾರ ಮಾಡಲಾಗಿ ನಾನು ಏಕೆ ಒಪ್ಪಿಕೊಂಡೆನೆಂದೆನಿಸಿತು ಏಕೆಂದರೆ, ನಾನು ಏನೆಂದು ನನ್ನ ಜೀವನ ಸ್ಮೃತಿಗಳನ್ನು ಬರೆಯಬೇಕು? ನಾನು ಲೌಕಿಕ, ನಾ

ಗಾಂಧಿಯವರಂತೆ ಲೋಕೋತ್ತರ ಪುರುಷನೇನೂ ಅಲ್ಲ
ಸಾಮಾನ್ಯ ಬುದ್ಧಿಯ ಸಾಮಾನ್ಯ ಜೀವನದ ಒಬ್ಬ ಪಾಮ
ರನು ನಾನು ಅಲ್ಲವೆ, ತನ್ನ ಜೀವನ ಚರಿತ್ರೆಯನ್ನ
ತಾನು ಬರೆಯುವುದು ಸನಾತನ ಸಂಪ್ರದಾಯವಲ್ಲ ತಮ್ಮ
ಸ್ತುತಿಯನ್ನು ಅನ್ಯರು ಮಾಡುವುದನ್ನು ಕೇಳುವುದನ್ನು
ಕೂಡ ಯಾರು ಶೂಲವಂತೆ ತಿಳಿಯುತ್ತಿದ್ದರೋ ಅವರು
ತಮ್ಮ ಸ್ತುತಿಯನ್ನು ತಾವೇ ಮಾಡಿಕೊಳ್ಳುವರೇ ? ಸನಾ
ತನ ಸಂಪ್ರದಾಯದ ಈ ಭಾವವನ್ನು ಬಸವೇಶ್ವರರ ಈ
ವಚನದಲ್ಲಿ ಚೆನ್ನಾಗಿ ಕಾಣಬಹುದು.

> “ಎನ್ನ ವರೊಲಿದು ಹೊನ್ನ ಶೂಲವಲಿಕ್ಕಿದರು, ಎನ್ನ
> ಹೊಗಳಿ ಹೊಗಳಿ ಹೊಗಳ್ತೆ ಎನ್ನ ಪ್ಪೈಗೊಂಡಿ
> ತಲ್ಲಾ ! ಅಯ್ಯಾ, ನಿಮ್ಮ ಮನ್ನಣೆಯೇ ಮಸೆದ
> ಲಗಾಗಿ ತಾಗಿತ್ತಲ್ಲಾ! ಅಯ್ಯಾ, ನೊಂದೆನು, ಸೈರಿಸ
> ಲಾರೆನು, ಕೂಡಲಸಂಗಮದೇವ, ನೀನೆನಗೊಲಿದ
> ನಾದರೆ, ಎನ್ನ ಹೊಗಳತೆಗಡ್ಡ ಬಾರಾ, ಧರ್ಮೀ ”

ಆದುದರಿಂದಲೇ ಅವರು “ಆತ್ಮಸ್ತುತಿಯನ್ನು ಪರನಿಂದೆ
ಯನ್ನು ಕೇಳಿಸದಂತಿರಿಸಯ್ಯಾ ಎಂದು ಅಂದರು ಚಾರು
ದತ್ತನು ಮರಣಕ್ಕಂಜುತ್ತಿರಲಿಲ್ಲ, ಕೀರ್ತಿಕಲಂಕಕ್ಕೆ ಅಂಜು
ತ್ತಿದ್ದನು ಹಾಗೆ, ನಮ್ಮವರು ಆತ್ಮಸ್ತುತಿಗೆ ಅಂಜುತ್ತಿದ್ದರು.
ಗ್ರಂಥಕರ್ತರು ಈ ಕಾರಣದಿಂದಲೇ (ಐತಿಹಾಸಿಕ ದೃಷ್ಟಿಯ
ಅಭಾವದ ಮೂಲಕವಲ್ಲ) ತಮ್ಮ ಹೆಸರನ್ನು ಹಿಂದಿಡುತ್ತಿ
ದ್ದರು ತಾವು ಮಾಡಿದ ಕೃತಿಗಳೇ ಮುಖ್ಯವೆಂದು ಅವರ
ಭಾವನೆ ಆದರೆ ಗ್ರಂಥಕರ್ತನ ಜೀವಿತದ ಬಗ್ಗೆಯೂ
ತಿಳಿದುಕೊಳ್ಳುವ ಕುತೂಹಲವು ಜನರಿಗೆ ಉಂಟಾಗುವುದು

ಸ್ವಾಭಾವಿಕ ಅವಕ್ಕಾಗಿ, ಮುಂದೆ ಗ್ರಂಥಕರ್ತರು ತಮ್ಮ ಕುಲಗೋತ್ರಗಳನ್ನು ಹೇಳುವ ಸಂಪ್ರದಾಯ ಬಿತ್ತು ತಮ್ಮ ಸಾಂಸಾರಿಕ ಜೀವನಕ್ಕೆ ನಮ್ಮವರು ವಿಶೇಷ ಮಹತ್ವ ಕೊಡುತ್ತಿರಲಿಲ್ಲ ಇದರಲ್ಲಿ ಅಹಂಕಾರವಿಹೀನತೆಯ ಉದಾತ್ತವಾದ ತತ್ತ್ವವು ಅಡಗಿದೆ ಇದಕ್ಕೆ ವಿರುದ್ಧವಾಗಿ ಪಾಶ್ಚಾತ್ಯರು ಆತ್ಮಚರಿತ್ರೆಯನ್ನು ಬರೆಯುವುದೊಂದು ಹೊಸ ಶಾಸ್ತ್ರವನ್ನೇ ನಿರ್ಮಿಸಿರುವರು ಅದರಲ್ಲಿಯೂ ಒಂದು ಉದಾತ್ತ ತತ್ತ್ವವಡಗಿದೆ ಅದಾವುದೆಂದರೆ ಲೋಕಶಿಕ್ಷಣ ಲೋಕಕಲ್ಯಾಣದ ಒಂದು ಸಾಧನವೆಂದೇ ಅವರು ಅದನ್ನು ಕೈಕೊಂಡಿರುವರಲ್ಲವೆ, ಉಪಕಾರಕ್ಕಾಗಿ ಅಲ್ಲಿ ನಾನು ಇವೆರಡೂ ಸಂಪ್ರದಾಯಗಳ ಸಮನ್ವಯವನ್ನು ಮಾಡಿ ಬರೆಯಬಹುದೋ ಏನೋ ಎಂದು ತೋಚಿತು ಮತ್ತು ನಾನು ನನ್ನ ಮುಂದೊಂದು ಪಟ್ಟಿಯನ್ನು ಸಿದ್ಧಮಾಡಿಕೊಂಡು, ಅದರಲ್ಲಿ ನನ್ನ ಜೀವನದ ಸ್ಮೃತಿಗಳ ಎಣಿಕವನ್ನು ಹೊಯ್ಯುವುದನ್ನು ಗೊತ್ತುಮಾಡಿ, ಬರೆಯಲಿಕ್ಕೆ ಪ್ರವೃತ್ತನಾಗಿ ರುವೆನು

ಆ ಪಟ್ಟಿಯು ಯಾವುದು, ಅದನ್ನು ನಾನು ಹೇಗೆ ತಯಾರು ಮಾಡಿಕೊಂಡೆನೆಂಬುದನ್ನು ಹೇಳುವುದಕ್ಕೆ ನನ್ನ ಜೀವನದ ಒಂದು ಸ್ಮೃತಿಯನ್ನು ಕೊಟ್ಟೇ ಪ್ರಾರಂಭಿಸುವೆನು

ಸುಮಾರು ೨೫-೩೦ ವರುಷಗಳ ಹಿಂದಿನ ಮಾತು ಮ ಗಾಂಧಿಯವರ ಆಫ್ರಿಕೆಯಲ್ಲಿಯ ಚರಿತ್ರೆಯನ್ನು ಬರೆಯಬೇಕೆಂದು ಡೋಕ (Doke) ಎಂಬೊಬ್ಬ ಯುರೋಪಿಯನ್ನರು ಬರೆದ ಅವರ ಚರಿತ್ರೆಯನ್ನು ಕೊಂಡುಕೊಂಡು,

ಅದನ್ನು ೧೯೫೧ನೆಯ ಇಸ್ವಿಯ ಜನವರಿ ತಿಂಗಳಲ್ಲಿ ಭಾಷಾಂತರಿಸಿದೆನು ಅದರಲ್ಲಿಯ ಒಂದು ಸಂಗತಿಯು ಈಗ ನನ್ನ ಧ್ಯಾನಕ್ಕೆ ಬರುತ್ತದೆ. ಡೋಕ ಇವರು ಗಾಂಧೀಜಿಯವರಿಗೆ ತಮ್ಮ ಚರಿತ್ರೆಯನ್ನು ಹೇಳುವುದಕ್ಕೆ ಕೇಳುವ ಮುಂಚೆ "ಗಾಂಧಿಯವರೇ, ನಾನು ನಿಮಗೆ ನಿಮ್ಮ ಮರಣಕ್ಕಿಂತಲೂ ಹೆಚ್ಚಿಗೆ ದುಃಖವೆನಿಸುವ ಒಂದು ಕೆಲಸವನ್ನು ಮಾಡಲಿಕ್ಕೆ ಹೇಳುತ್ತೇನೆ, ಮಾಡುವಿರಾ?" ಎಂದು ಕೇಳಿದರು ಮ ಗಾಂಧಿಯವರು ನಕ್ಕು ಅಂಥದಾವುದೆಂದು ಕೇಳಲು, "ನಿಮ್ಮ ಚರಿತ್ರೆಯನ್ನು ಹೇಳಿರಿ ನಿಮ್ಮ ಸಲುವಾಗಿಯಲ್ಲದಿದ್ದರೂ ಲೋಕಸಂಗ್ರಹಕ್ಕಾಗಿ ಇದನ್ನು ಮಾಡಲೇಬೇಕು" ಎಂದು ಹೇಳಿ, ಅವರಿಂದ ಅದನ್ನು ಅರಿತುಕೊಂಡು ಬರೆದರೆಂಬ ಅರ್ಥದ ವಾಕ್ಯಗಳನ್ನು ಓದಿದಂತೆ ನೆನಪಿಗೆ ಬರುತ್ತದೆ. ಆದರೆ, 'ನ ದೇವಚರಿತಂ ಚರೇತ್' ಎಂಬಂತೆ ಲೋಕೋತ್ತರ ಪುರುಷರ ಆಚರಣೆಯನ್ನು ನಾವು ಅಕ್ಷರಶಃ ಅನುಕರಿಸುವುದು ಸರಿಯಲ್ಲ ಮ ಗಾಂಧಿಯವರು ಮುಂದೆ, ತಮ್ಮ ಜೀವನ ಚರಿತೆಯಲ್ಲಿ ತಮ್ಮ ಸಾಂಸಾರಿಕ ಜೀವನದ ಗುಣದೋಷಗಳನ್ನು ಕೂಡ ಪೂರಾ ಬಿಚ್ಚಿ ಹೇಳಿರುವರು ಅವರ ಮಾತು ಬೇರೆ; ನನ್ನಂಥ ಅಲ್ಪನ ಮಾತು ಬೇರೆ. ಅಲ್ಲದೆ, ಒಬ್ಬರ ಜೀವಿತದ ತತ್ತ್ವಗಳು ಅನ್ಯರಿಗೆ ಮಾರ್ಗದರ್ಶಕಗಳಾಗಬಹುದು, ಅವರ ಅನುಭವವು ಅಷ್ಟೊಂದು ಮಾರ್ಗದರ್ಶಕವಾಗಲಾರದೆಂದೇ ನನ್ನ ಮತ.

ಅವನ ಗೊಡವೆಯೇಕೆ, ಅವನಾರು ನೀನಾರು?
ಅವನ ಪಾಪಕ್ಕೆ ನೀ ಭಾಗಾದಿಯೇ?

ಅವನುತ್ತಮನಾದಡವನೆ ಬದುಕಿದ ಕಾಣೋ
ಅವನು ಪುಣ್ಯಮಾಡಿದರೆ ಆವನ ಕುಲಉದ್ಧಾರ

ಎಂದು ವಿಜಯದಾಸರು ಹೇಳಿದ್ದೇ ನಿಜ ಆದಕಾರಣ ಅವರಂತೆ ನನ್ನ ಸಾಂಸಾರಿಕ ಜೀವನದ ಹಾಳುರಗಳಿಯನ್ನು ಹೇಳಿ ಪ್ರಯೋಜನವಿಲ್ಲವೆಂದೆನಿಸಿತು ಆದುದರಿಂದ ನನ್ನ ಈ ಜೀವನಸ್ಮೃತಿಗಳಲ್ಲಿ ನಾನು ನನ್ನ ಸಾಂಸಾರಿಕ ಜೀವನದ ಸ್ಮೃತಿಗಳನ್ನು ಕೇವಲ ಹಿನ್ನೋಟ (Back-ground)ದ ಮಟ್ಟಿಗೆ ಮಾತ್ರವೇ ಕೊಟ್ಟು, ನನ್ನ ಸಾರ್ವಜನಿಕ ಜೀವನಕ್ಕೆ ಪ್ರಾಧಾನ್ಯವನ್ನು ಕೊಡುತ್ತೇನೆ. ರಾಜಕಾರಣ, ವಾಙ್ಮಯ, ಇತಿಹಾಸ, ಏಕೀಕರಣ, ಧರ್ಮ ಮುಂತಾದ ಅನೇಕ ಕ್ಷೇತ್ರಗಳಲ್ಲಿ ನನ್ನ ಅಲ್ಪ ಬುದ್ಧಿಗೆ ಮತ್ತು ನನ್ನ ಅಲ್ಪ ಶಕ್ತಿಗೆ ತಕ್ಕಂತೆ ನಾನು ಕೆಲಸವನ್ನು ಮಾಡಿರುವೆನು ಮತ್ತು ನನ್ನ ಸುದೈವದಿಂದ, ನಾನು ಸಾರ್ವಜನಿಕ ರಣಾಂಗಣದಲ್ಲಿ ಬರುವ ಕಾಲಕ್ಕೂ ಹಿಂದುಸ್ಥಾನದಲ್ಲಿ ಹೊಸ ರಾಷ್ಟ್ರೀಯತ್ವವು ಉದಯವಾಗುವ ಕಾಲಕ್ಕೂ ಮೇಳು ಕೂಡುತ್ತದೆ. ೧೯೦೫ನೆಯ ಇಸ್ವಿಯಲ್ಲಿ ರಾಷ್ಟ್ರದಲ್ಲಿ ನವಚೈತನ್ಯವು ಸ್ಫುರಣಗೊಂಡಿತು. ಅಲ್ಲಿಯ ವರೆಗೆ ಅದರ ಬಾಲ್ಯ. ಹಾಗೆಯೇ ಅಲ್ಲಿಯ ವರೆಗೆ ನನ್ನದೂ ಬಾಲ್ಯ. ನಾನು ನಿಶ್ಚಿತವಾದ ಧ್ಯೇಯದಿಂದ ಸಾರ್ವಜನಿಕ ಕ್ಷೇತ್ರದಲ್ಲಿ ಹೊಕ್ಕದ್ದು ೧೯೦೫-೦೬ರ ಸುಮಾರಕ್ಕೆ. ಆದಕಾರಣ, ನಾನು ನನ್ನ ಸಾರ್ವಜನಿಕ ಜೀವನದ ಅನುಭವವನ್ನೂ ಸ್ಮೃತಿಗಳನ್ನೂ ಕೊಟ್ಟರೆ, ಕರ್ನಾಟಕದ ಆ ಕಾಲದ ಇತಿಹಾಸವನ್ನು ತಿಳಿದುಕೊಳ್ಳುವುದಕ್ಕೆ ಬಲು ಮಟ್ಟಿಗೆ ಸಹಾಯವಾಗಬಹುದು. ನನ್ನ ಜೀವನ ಚರಿ

ತೆಯ ಚಿಕ್ಕದೊಂದು ಪುಸ್ತಕವನ್ನು ಪ್ರಕಟಿಸುವುದಕ್ಕೆ
೨೦-೨೫ ವರ್ಷಗಳ ಹಿಂದೆ ಶ್ರೀ ಶೆಣೈ ಎಂಬೊಬ್ಬ ವಿದ್ಯಾ
ರ್ಥಿಯು ಪ್ರವೃತ್ತನಾಗಿದ್ದನು ನಾನು ಆಗ ಕೊಡಲಿಲ್ಲ
ಮುಂದೆ ಇಬ್ಬರು ಮೂವರು ಕನ್ನಡ ಶಾಲೆಯ ಮಾಸ್ತರ
ಜನರೂ ಕೇಳಿದ್ದರು ಅದಕ್ಕೂ ಒಪ್ಪಲಿಲ್ಲ ಕರ್ನಾಟಕದ
ರಾಜಕಾರಣದ ಇತಿಹಾಸವನ್ನು ಬರೆಯುವುದಕ್ಕೆ ಶ್ರೀ
ಬುರ್ಲಿ ಬಿಂದಾಚಾರ್ಯರೂ ಶ್ರೀ ದತ್ತಾತ್ರಯ ಕರಮರ
ಕರರವರೂ ಸಂಯುಕ್ತಕರ್ನಾಟಕದ ಸಂಪಾದಕರೂ ಕೇಳಿ
ದ್ದರು ನನ್ನ ಹೆಸರನ್ನು ಹಾಕದೆ ಬರೆಯುವುದು ಶಕ್ಯವಿಲ್ಲ
ದ್ದರಿಂದಲೂ ಹಾಗೆ ಮಾಡುವುದು ನನ್ನ ಮನಸ್ಸಿನಲ್ಲಿ
ಇಲ್ಲದ್ದರಿಂದಲೂ ನಾನು ನಿರಾಕರಿಸಿದ್ದೆನು ಆದರೆ, ಈಗ
ಜಯಕರ್ನಾಟಕದವರ ಆಗ್ರಹದ ಮೂಲಕ ಹೇಗೂ ಬರ
ಯಲೇಬೇಕಾಗಿದೆ ಹಿಂದೆ ಮಾಡದಿದ್ದುದನ್ನು ಇಂದು
ಮಾಡಲು ನನಗೆ ಒಂದು ಪರವಾನಿಗೆ (License) ದೊರೆ
ತಂತಾಗಿದೆ. ಅಲ್ಲದೆ, ತನ್ನ ಜೀವನವು ತನಗೆ ತಿಳಿದಂತೆ
ಅನ್ಯರಿಗೆ ತಿಳಿಯುವುದು ಶಕ್ಯವಿಲ್ಲ ಜೀವನವೆಂಬ ಗಡಿ
ಯಾಳದ ಹೊರಮುಳ್ಳುಗಳು ತಿರುಗುವುದನ್ನು ಮಾತ್ರವೇ
ಜನರು ಕಾಂಬರು. ನನ್ನ ಜೀವನ ಗಡಿಯಾಳದೊಳಗಿನ
ಒಳಯಂತ್ರಗಳ ತಿರುಗುವಿಕೆಯನ್ನು ನನ್ನ ಹೊರತು ಯಾರು
ಹೇಳಬಲ್ಲರು? ತನ್ನ ಮೋರೆಯನ್ನು ಅನ್ಯರು ನೋಡ
ಬಲ್ಲರು, ಒಳಎದೆಯನ್ನು ನೋಡಲಾರರು. ತಮ್ಮ
ಚರಿತ್ರೆಯನ್ನು ಅನ್ಯರು ಬರೆಯುವುದರಲ್ಲಿ ಕೆಲವು ಗುಣ
ಗಳಿದ್ದರೆ, ತಾನೇ ಬರೆಯುವುದರಲ್ಲಿಯೂ ಕೆಲವು ಗುಣಗ
ಳಿವೆ. ಆದಕಾರಣ, ನಾನು ನನ್ನ ಜೀವನದಲ್ಲಿ ಇಟ್ಟುಕೊಂಡಿ

ರುವ ಕೆಲವು ವಿಶಿಷ್ಟ ಮತ್ತು ವಿಕ್ಷಿಪ್ತವಾಗಿ ತೋರುವ
ತತ್ವಗಳನ್ನೂ ಅವುಗಳ ಸೂತ್ರಗಳನ್ನೂ ಇದರಲ್ಲಿ ಹೇಳು
ವುದರಿಂದ, ನನ್ನ ಜೀವನದ ಒಗಟವು ಬಿಡುವುದಕ್ಕೂ
ಸಹಾಯವಾಗಬಹುದೆಂದು ನನ್ನ ನಂಬಿಗೆ. ಒಟ್ಟಿಗೆ,
ಯುಗಧರ್ಮವು ಬದಲಾದಂತೆ, ಅದರ ಒಳರಂಗರೂಪವೂ
ಬದಲಾಗುತ್ತದೆ—ಆಗಬೇಕು ಆದರೆ, ತಿರುಳನ್ನು ಕಾಯ್ದು
ಕೊಂಡು ರೂಪವನ್ನು ಬದಲುಮಾಡುವುದೇ ಜಾಣತನದ
ಲಕ್ಷಣ. ಆದಕಾರಣ, ಲೋಕಸಂಗ್ರಹಕ್ಕಾಗಿ ಅಹಂಕಾರ
ವಿಹೀನತೆಯಿಂದ ಈ ಸ್ಮೃತಿಗಳನ್ನು ಬರೆಯುವೆನು-ಅಲ್ಲ-
ಬರೆಯಲೆತ್ನಿಸುವೆನು.

ಹೀಗೆ ತನ್ನ ಸ್ವಂತ ಚರಿತ್ರೆಯನ್ನು ತಾನು ಹೇಳು
ವುದರಲ್ಲಿ ಒಂದು ದೊಡ್ಡ ಗಂಡಾಂತರವೂ ಇದೆ. ಅಹಂ
ಕಾರಕ್ಕೆ ಬಲಿಬಿದ್ದು ತನ್ನಲ್ಲಿದ್ದ ದೋಷಗಳನ್ನು ಮುಚ್ಚಿ
ಕೊಂಡು, ಇದ್ದ ಅಲ್ಪಸ್ವಲ್ಪ ಗುಣಗಳನ್ನು ಪರ್ವತಪ್ರಾಯ
ವಾಗಿ ಬೆಳಸಿಕೊಳ್ಳುವ ಪ್ರವೃತ್ತಿ ಉಂಟಾಗುವ ಅಂಜಿಕೆ
ಯಿದೆ. ಅಹಂಕಾರವು ತಲೆಯೆತ್ತಿದಕೂಡಲೆ, ಅದರಮೇಲೆ
ಅಪ್ಪಳಿಸಲಿಕ್ಕೆ "ನಾಹಂ ಕರ್ತಾ, ಹರಿಃ ಕರ್ತಾ, ತತ್ಪೂಜಾ
ಕರ್ಮ ಚಾಖಿಲಂ" ಎಂಬ ವಾಕ್ಯವು ಬಲವಾದ ಅಸ್ತ್ರ. ಆ
ವಾಕ್ಯವನ್ನು ಜಪಿಸಿದಕೂಡಲೆ ತನ್ನಲ್ಲಿದ್ದ ಭೂತಗಳು ಓಡಿ
ಹೋಗಲೇಬೇಕು. ಭೂತೋಚ್ಚಾಟನೆಗೆ ಅದು ಮಹಾ
ಮಂತ್ರವೆಂಬುದು ನನ್ನ ಅನುಭವ. ಈ ಲೇಖನಮಾಲೆ
ಯನ್ನು ಬರೆಯುವಾಗ, ಅಹಂಕಾರಾತಿರೇಕದಿಂದ
ಉಬ್ಬಿಯೂ ಹೋಗಬಾರದೆಂದೂ ವಿನಯಾತಿರೇಕದಿಂದ
ನಿಷ್ಕಾರಣವಾಗಿ ತಗ್ಗಿಯೂ ಹೋಗಬಾರದೆಂದೂ ನಿಶ್ಚಯ

ಮಾಡಿದ್ದೇನೆ ಇದಕ್ಕೂ ಮೀರಿ, ನನ್ನಿಂದ ಪ್ರಮಾದ
ವಾದರೆ, ಅದು ನನ್ನ ಪ್ರಕೃತಿಯ ದೋಷ (Weakness of
flesh)ವೆಂದು ತಿಳಿದು ವಾಚಕರು ಕ್ಷಮಿಸಬೇಕು

ಇದಾಯಿತು, ನಾನು ಕೈಕೊಂಡ ಪದ್ಧತಿಯ ವಿಚಾರ
ಇನ್ನು ನನ್ನ ಸಾಧನಗಳನ್ನು ಕುರಿತು ತುಸು ಹೇಳುವೆನು
ನನಗೆ ಹೀಗೆ ನನ್ನ ಜೀವನಸ್ಮೃತಿಗಳನ್ನು ಬರೆಯುವ
ಪ್ರಸಂಗ ಒದಗೀತೆಂಬುದು ಕನಸುಮನಸಿನಲ್ಲಿ ಸಹ ಇರದ
ಕಾರಣ, ನಾನು ಬಹಳ ಅನೇಕ ಸಂಗತಿಗಳನ್ನು ಮರೆತು
ಬಿಟ್ಟಿರುವೆನು ಅಲ್ಲದೆ, ಚಿಕ್ಕಪುಟ್ಟ ಸಂಗತಿಗಳನ್ನು ನೆನಪಿ
ನಲ್ಲಿಡುವುದು ನನ್ನ ಸ್ವಭಾವವೂ ಅಲ್ಲ ಆದರೆ ಒಂದು
ರೀತಿಯಿಂದ ಇದು ಒಳ್ಳೆಯದೇ ಆಯಿತೆನ್ನಬೇಕು. ಅದ
ರಿಂದ ಮನಸ್ಸಿನಮೇಲೆ ಒತ್ತಿಯೊತ್ತಿ ಮೂಡಿದ ಮುಖ್ಯ
ಸಂಗತಿಗಳನ್ನಷ್ಟೇ ಹೇಳಲಿಕ್ಕೆ ಅನುಕೂಲವಾಗಿರುತ್ತದೆ
ನನ್ನ ಖಾಸಗೀ ಜೀವನದ ಬಗ್ಗೆ ನಾನು [illegible] ಇಸ್ಸಿ
ಯಿಂದ ಅನೇಕ ವರ್ಷ ದಿನಚರಿಗಳನ್ನಿಡುತ್ತ ಬಂದಿದ್ದೆನು
ಸಾರ್ವಜನಿಕ ಚಳವಳಿಗಳ ಬಗ್ಗೆಯೂ ನಾನು ಆಗಾಗ
ಬರೆದಿಡುತ್ತಿದ್ದೆ ಪತ್ರವ್ಯವಹಾರವನ್ನೂ ಕಾದಿಟ್ಟಿದ್ದೆ ಆದರೆ
ಎರಡು ಮೂರು ಸಂದರ್ಭಗಳಲ್ಲಿ, ಅವನ್ನು ಬಚ್ಚಿಡುವ
ಮತ್ತು ಸುಟ್ಟುಬಿಡುವ ಪ್ರಸಂಗಗಳು ಬಂದದ್ದರಿಂದ ಅವೂ
ಬಹುಶಃ ನನ್ನ ಹತ್ತರವಿಲ್ಲ [illegible] ಇಸ್ಸಿಯಿಂದ,
ನನ್ನ ಮನದಲ್ಲಿ ಮಿಂಚಿಹೋಗುತ್ತಿದ್ದ ತಾತ್ವಿಕವಿಚಾರ
ಗಳನ್ನೂ ವಿವಿಧ ವಿಷಯಗಳ ಮೇಲಿನ ವಿಚಾರಗಳನ್ನೂ
‘ಅಕ್ರಮವಿಚಾರತರಂಗ’ ‘ವಿವಿಧವಿಚಾರ ಸಂಗ್ರಹ’
ಮುಂತಾದ ಹೆಸರುಗಳಿಂದ ಬರೆದಿಡುವ ಪರಿಪಾಠವನ್ನಿ

ಟ್ಟಿದ್ದೇನೆ ಆದರೆ, ನೇಮದಿಂದ ಬರೆದಿಟ್ಟಿಲ್ಲ. ಈಗ ಉಳಿದಿರುವ ಆ ಕೆಲವು ಟಿಪ್ಪಣಿಗಳು ನನಗೆ ಉಪಯೋಗ ಬೀಳಬಹುದು. ಇದಲ್ಲದೆ, ಲೋ. ಟಿಳಕರ ಬಗ್ಗೆ ನನ್ನ ಕೆಲವು ಸ್ಮೃತಿಗಳನ್ನು ಕೊಡಲಿಕ್ಕೆ ಶ್ರೀ ಬಾಪಟ ಇವರು ಕೇಳಿದಾಗ, ನಾನು ಕೆಲವು ಸ್ಮೃತಿಗಳನ್ನು ಕೊಟ್ಟಿದ್ದೆನು. ಅವು ಅವರ आठवणी व आख्यायिका ಎಂಬ ಗ್ರಂಥದಲ್ಲಿ ಮುದ್ರಿತವಾಗಿವೆ ಹಾಗೆಯೇ ಡೆಕ್ಕನ ಎಜ್ಯುಕೇಶನ್ ಸೊಸಾಯಿಟಿಯವರು ತಮ್ಮ ಸುವರ್ಣಮಹೋತ್ಸವದ ಗ್ರಂಥದಲ್ಲಿ, ತಮ್ಮ ಫರ್ಗ್ಯೂಸನ್ ಕಾಲೇಜಿನಲ್ಲಿ ಕಲಿತ ಹಳೆಯ ವಿದ್ಯಾರ್ಥಿಗಳಲ್ಲಿ ೨೮ ಜನರಿಂದ ವಿಶೇಷ ಲೇಖಗಳನ್ನು ತರಿಸಿಕೊಂಡು ಮುದ್ರಿಸಿರುವರು ಅವರಲ್ಲಿ ನಾನೂ ಒಬ್ಬನು. ನನ್ನ ಕಾಲೇಜಿನ ವಿದ್ಯಾರ್ಥಿದಶೆಯ ಸ್ಮೃತಿಗಳೂ ಅದರಲ್ಲಿ ಮುದ್ರಿತವಾಗಿವೆ ಶ್ರೀ ಬುರ್ಲಿ ಬಿಂದಾಚಾರ್ಯರಿಗೆ ೧-೨ ವರ್ಷಗಳ ಹಿಂದೆ ಮಾಡಿಕೊಟ್ಟ ರಾಜಕಾರಣದ ಟಿಪ್ಪಣಿಗಳೂ ಈಗ ನನ್ನ ಕೈಗೆ ಬಂದಿವೆ ಇವೆಲ್ಲವುಗಳ ಆಧಾರದಿಂದಲೂ ನನ್ನ ನೆನಪಿನ ಆಧಾರದಿಂದಲೂ ಈ ಲೇಖನಮಾಲಿಯನ್ನು ಬರೆಯುವೆನು. ಹೇಳಿ ಕೇಳಿ ಇವು ಸ್ಮೃತಿಗಳು. ಅಲ್ಲದೆ, ನಾನು ಮರೆಗುಳಿಯು ಆದುದರಿಂದ, ನನಗೆ ಸಂಬಂಧವಿದ್ದವರು ನೆನಪುಮಾಡಿಕೊಟ್ಟು, ಎಲ್ಲರೂ ಸಹಾಯಮಾಡಿ, ನನ್ನಿಂದ ಈ ಕಾರ್ಯವನ್ನು ಪೂರ್ಣಮಾಡಿಸಿಕೊಳ್ಳಬೇಕೆಂದು ವಿಜ್ಞಾಪನೆ

ಒಟ್ಟಿಗೆ, ಇದು ಕೇವಲ ಆತ್ಮಚರಿತೆಯೂ ಅಲ್ಲ, ಇತಿಹಾಸವೂ ಅಲ್ಲ, ವಿಚಾರಪ್ರಬಂಧವೂ ಅಲ್ಲ, ತತ್ವಗ್ರಂಥವೂ ಅಲ್ಲ. ಇವೆಲ್ಲವುಗಳ ಸರಿಬೆರಿಕೆಯಾದ ಗ್ರಂಥ, ಆತ್ಮ

ಪುರಾಣ. ನಾನು, ಕಾಲಿದಾಸನು ಹೇಳಿದಂತೆ ವೇದಾಭ್ಯಾಸಜಡನಲ್ಲದಿದ್ದರೂ ತತ್ವಾಭ್ಯಾಸಜಡನು. ಈಗಂತೂ ವಿಚಾರಸಾಮ್ರಾಜ್ಯದಲ್ಲಿ ವಿಹರಿಸುತ್ತ, ನನ್ನಷ್ಟಕ್ಕೆ ನಾನು ಆನಂದಪಡುತ್ತಿರುವ ಪ್ರಾಣಿ ನನಗೆ ಮನೋರಂಜನದ ಕಡೆಗೆ ಮನಸ್ಸು ಕಡಿಮೆ ಶ್ರೀ ಬೇಂದ್ರೆಯವರಂತೆ ಕವಿತ್ವಾನಂದನೂ ನಾನಲ್ಲ; ಶ್ರೀರಂಗ ( ಆರ್ ವಿ ಜಹಾಗೀರದಾರ) ರಂತೆ ವಿನೋದಾನಂದನೂ ನಾನಲ್ಲ, ಆದ ಕಾರಣ, ನನ್ನ ಲೇಖನಗಳು ಎಷ್ಟರಮಟ್ಟಿಗೆ ಚಿತ್ತಾಕರ್ಷಕವಾಗುವವೆಂಬುದನ್ನು ನಾನು ಹೇಳಲಾರೆ ಅದಕ್ಕೆ ಉಪಾಯವಿಲ್ಲ. ಜಯಕರ್ನಾಟಕದ ಸಂಪಾದಕರು ಆಶಿಸಿದಂತೆ ಇದು ನಮ್ಮ ನಾಡಿನ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಕಾಲಖಂಡ ( Epock-making book ) ವಾಗದಿದ್ದರೂ, ನಾನು ವ್ಯರ್ಥವಾಗಿ ವಾಚಕರ ಕಾಲಖಂಡನೆ (waste of time) ಮಾಡಿದೆನೆಂದು ಮಾನಖಂಡನೆಗೆ ಗುರಿಯಾಗದಿದ್ದರೂ ಸಾಕೆಂದು ಹೇಳಿ ನನ್ನುಡಿಯ ಈ ಮುನ್ನುಡಿಯನ್ನು ಮುಗಿಸುತ್ತೇನೆ.



೨ನೆಯ ಪ್ರಕರಣ

# ನನ್ನ ಸಾಂಸಾರಿಕ ಜೀವನದ ರೂಪರೇಷೆ

ತನ್ನ ಸಾಂಸಾರಿಕ ಜೀವನದ ಬಗ್ಗೆ ಹೇಳುವ್ರದಕ್ಕೆ ಮನು ಷ್ಯನ ಮನಸ್ಸು ಹೇಗೆ ಹಿಂಜರಿಯುತ್ತದೆಂಬುದೂ ಕೈಯು ಹೇಗೆ ಮುದುಡಿಕೊಳ್ಳುತ್ತದೆಂಬುದೂ ನನಗೆ ಈಗ ಅನು ಭವಕ್ಕೆ ಬಂದಷ್ಟು ಹಿಂದೆ ಎಂದೂ ಬಂದಿರಲಿಲ್ಲ ಇರಲಿ

ನನ್ನ ಇಡೀ ಜೀವನದಲ್ಲಿ ಸ್ಥೂಲವಾನದಿಂದ ಮೂರು ಭಾಗಗಳನ್ನು ಮಾಡಬಹುದು '(೧) ಸಾಂಸಾರಿಕ ಜೀವನ (೨) ಸಾರ್ವಜನಿಕಜೀವನ (೩) ಏಕಾಂತಿಕ ಜೀವನ ಮುಂಚೆ ಈ ಪ್ರಕರಣದಲ್ಲಿ, ನನ್ನ ಸಾಂಸಾರಿಕ ಜೀವನದ ಸಂಗತಿಗಳನ್ನು ಕಾಲಾನುಕ್ರಮದಿಂದ ಅತಿಸಂಕ್ಷೇಪ ವಾಗಿ ಕೊಟ್ಟು ಮುಗಿಸಿಬಿಡುವೆನು ಅದರಿಂದ, ಮುಂದೆ ವಿಷ ಯಾನುಕ್ರಮವಾಗಿ ಕೊಡುವ ಸ್ಮೃತಿಗಳ ಸ್ಪಷ್ಟ ಕಲ್ಪನೆಯು ಬರುವುದಕ್ಕೆ ಅನುಕೂಲವಾಗುವುದು. ಕುತೂಹಲವುಳ್ಳ ವರು ಇದನ್ನು ಓದಬಹುದು.

ನಮ್ಮ ತಂದೆಯ ಹೆಸರು ಭೀಮರಾವ, ತಾಯಿಯ ಹೆಸರು ಭಾಗೀರಥೀಬಾಯಿ. ಭೀಮರಾಯರ ಅಜ್ಜಂದಿರಾದ ನೀಲ ಕಂಠ ವೆಂಕಟೇಶ ಆದವಾನಿ ಎಂಬವರು ೧೮೨೪--೨೫ ನೆಯ ಇಸ್ವಿಯ ಸುಮಾರಕ್ಕೆ ಬಳ್ಳಾರಿಯಲ್ಲಿ ನಿಸ್ಬೆತ್ (Nisbet) ಎಂಬ ಕಲೆಕ್ಟರರ ಕೈಕೆಳಗೆ ದೊಡ್ಡ ಮುಲ್ಕಿ ಅಧಿಕಾರಿಗಳಾಗಿದ್ದರು ನಿಸ್ಬೆತ್ ಸಾಹೇಬರು ಮುಂಬಯಿ ಇಲಾಖೆಗೆ ಬರುವಾಗ, ಬುದ್ಧಿವಂತರೆಂದು ತಿಳಿದು ನೀಲಕಂಠ

ರಾಯರನ್ನು ತಮ್ಮ ಸಂಗಡ ಕರೆದುಕೊಂಡು ಬಂದರು ನೀಲಕಂಠರಾಯರು ೧೮೨೯ನೆಯ ಇಸ್ವಿಯಲ್ಲಿ ಹಾನಗಲ್ಲ ನವಲಗುಂದ ಮುಂತಾದ ಕೆಲವು ತಾಲೂಕುಗಳ ಮೇಲೆ ಮುಖ್ಯ ಮುಲ್ಕಿ ಅಧಿಕಾರಿಗಳಾಗಿ ನೇಮಿಸಲ್ಪಟ್ಟರು. ಅವರು ಅನೇಕ ವರ್ಷ ಹಾನಗಲ್ಲಿನಲ್ಲಿ ವಾಸಿಸಿದ್ದರು ಅಲ್ಲಿಯ ಧರ್ಮಾನದಿಗೆ ಘಾಟನ್ನು ಕಟ್ಟಿಸಿದರು ನಮ್ಮ ತಂದೆಯವರು ಅನೇಕ ವರ್ಷ "ಹಾನಗಲ್ಲಕರ" ಎಂದೇ ಅಡ್ಡ ಹೆಸರು ಹಚ್ಚಿದ್ದರು. ನೀಲಕಂಠರಾಯರನ್ನು ಅವರ ತಾಯಿ ಒಂದು ಈಶ್ವರದೇವರ ಗುಡಿಯಲ್ಲಿ ಹಡೆದುದರಿಂದ, ಅವರಿಗೆ ಆ ಹೆಸರು ಇಡಲ್ಪಟ್ಟಿತ್ತು ವಸ್ತುತಃ ಮಾಧ್ವರಲ್ಲಿ 'ನೀಲಕಂಠ'ವೆಂಬ ಹೆಸರು ಕಡಿಮೆ. ಮುಂದೆ, ಅವರ ಮೊಮ್ಮಗನಿಗೂ ಅದೇ ಹೆಸರು ಇಟ್ಟಿತ್ತು ನೀಲಕಂಠರಾಯರಿಗೆ ವೆಂಕಟರಾವ ಮತ್ತು ಕೃಷ್ಣರಾವ ಎಂಬಿಬ್ಬರು ಗಂಡು ಮಕ್ಕಳು. ವೆಂಕಟರಾಯರ ಹೊಟ್ಟೆಯಲ್ಲಿ ನಮ್ಮ ತಂದೆ ಭೀಮರಾಯರೊಬ್ಬರೇ ಮಕ್ಕಳು. ಕೃಷ್ಣರಾಯರ ಸಂತತಿಯವರು ಅನೇಕರಿದ್ದಾರೆ ನೀಲಕಂಠರಾಯರ ಮಗಳಾದ ವೆಂಕೂಬಾಯಿ ಎಂಬವಳನ್ನು ಸಾತಾರೆಯಲ್ಲಿ ಫಡನವೀಸರಾಗಿದ್ದ ಕೃಷ್ಣರಾವ ಗುತ್ತೀಕರ ಇವರ ಮಗ ನಾನಾರಾಯರಿಗೆ ಕೊಟ್ಟಿತ್ತು. ಕೃಷ್ಣರಾಯರು ೧೮೨೯ ನೆಯ ಇಸ್ವಿಯಲ್ಲಿ ಸತ್ತರು. ಆಗ, ನೀಲಕಂಠರಾಯರ ವರ್ಚಸ್ಸು ಸರಕಾರದಲ್ಲಿ ವಿಶೇಷವಿದ್ದುದರಿಂದ, ಅವರ ಪ್ರಯತ್ನದಿಂದ ಹೊಳೆಆಲೂರ ಗ್ರಾಮವು ನಾನಾರಾವ ಇವರಿಗೆ ೧೮೩೦ರಲ್ಲಿ ಜಹಾಗೀರಾಗಿ ದೊರೆಯಿತು. ಆದರೆ ನಾನಾರಾಯರು ಅನೇಕ ವರುಷ ಸಾತಾರೆಯಲ್ಲಿ ತಮ್ಮ ವಾಡೆ

ಯಲ್ಲಿ ಇರುತ್ತಿದ್ದರು ನನ್ನ ಅಜ್ಜಂದಿರಾದ ವೆಂಕಟರಾಯರು ಆಲೂರಲ್ಲಿದ್ದು ಜಹಾಗೀರ ವಹಿವಾಟು ಮಾಡುತ್ತಿದ್ದರು. ಮುಂದೆ ನಾನಾರಾಯರು ಆಲೂರಿಗೆ ಬಂದ ಬಳಿಕ ಕೂಡ, ಅವರೆಲ್ಲರೂ ಏಕತ್ರ ಕುಟುಂಬದ ವರಂತೆಯೇ ಇರಹತ್ತಿದರು ವೆಂಕಟರಾಯರು ೧೮೫೦ನೆಯ ಇಸ್ವಿಯ ಸುಮಾರಕ್ಕೆ ತೀರಿಕೊಂಡರು. ಆಗ ನಮ್ಮ ತಂದೆಯವರು ತೀರ ಚಿಕ್ಕವರು ಅಂದರೆ ೨-೩ ವರ್ಷದವರಿದ್ದುದರಿಂದ ಬಾಗಲಕೋಟೆಯಲ್ಲಿ ಮುನಸುಫರಾಗಿದ್ದ ಅವರ ಸೋದರ ಮಾವಂದಿರಾದ ಶ್ರೀನಿವಾಸರಾವ ಹಚ್ಚೊಳ್ಳಿ ಜಹಾಗೀರದಾರ ಬಲಕುಂದಿ ಇವರು ನಮ್ಮ ತಂದೆಯವರನ್ನೂ ಅಜ್ಜಿಯನ್ನೂ ಕರೆದುಕೊಂಡು ಹೋಗಿ ಸಂರಕ್ಷಣೆಮಾಡಿದರು ವಯಸ್ಸಿಗೆ ಬರುವ ವರೆಗೆ ನಮ್ಮ ತಂದೆಯವರು ಬಾಗಲಕೋಟೆಯಲ್ಲಿ ಇದ್ದು ೧೮೬೫ರಲ್ಲಿ "ಸರಕಾರೀ ನವಕರಿ ಉಮೇದವಾರಿ ಕನ್ನಡ ಪರೀಕ್ಷೆ" ಪಾಸಾದರು. ಆದರಲ್ಲಿ ಅವರಿಗೆ "೧೬ ಆಣೆಗಳಲ್ಲಿ ೧೧೧೪" ಗುಣಗಳು ಬಿದ್ದಿದ್ದವು. (ಆಗ ಮಾರ್ಕ್ಸ ಎಣಿಸುವ ಪದ್ಧತಿ ಹಾಗೆ ಇತ್ತು) ಪರೀಕ್ಷೆ ಪಾಸಾದ ಕೂಡಲೆ ಕಲಾದಗಿಯಲ್ಲಿ ಲೋಕಲ್‌ಫಂಡ ಕಾರಕೂನರಾದರು. ಅವರು ಅಲ್ಲಿ ೧೦-೧೨ ವರ್ಷ ಕೆಲಸ ಮಾಡಿದರು. ಅವರಿಗೆ ಲೋಕಲ್ ಫಂಡ ಭೀಮರಾಯರೆಂದೇ ಜನರು ಕರೆಯುತ್ತಿದ್ದರು. ಮುಂದೆ, ಕಲಾದಗಿ ಜಿಲ್ಲೆಯ ಬದಲು ವಿಜಾಪುರವು ಜಿಲ್ಲೆಯಾಯಿತು. ಭೀಮರಾಯರು ವಿಜಾಪುರಕ್ಕೆ ಶಿರಸ್ತೆದಾರರಾದರು ಸ್ವಲ್ಪ ದಿವಸಗಳಲ್ಲಿ ಅಂದರೆ ೧೮೮೦ ರಲ್ಲಿ ವಿಜಾಪುರದಲ್ಲಿ ನನ್ನ ಜನ್ಮವಾಯಿತು ಅಲ್ಲಿದ್ದಾಗ ಭೀಮ

ರಾಯರು ವಿಜಾಪುರ ಸಂಬಂಧದ ಐತಿಹಾಸಿಕ ಟಿಪ್ಪಣಿ
ಗಳನ್ನು ಕಲೆಹಾಕಿ ೧೮೮೭ರಲ್ಲಿ ಅವನ್ನು ಗವರ್ನರರ
ಕಡೆಗೆ ಕಳುಹಿಸಿದರು. ಮುಂದೆ ಅವರು ನವಲಗುಂದ,
ಗದಗ, ಹಾನಗಲ್ಲ, ಕರ್ಜಗಿ, ಪುನಃ ನವಲಗುಂದ, ಮುದ್ದೇಬಿ
ಹಾಳ, ಬಾಗೇವಾಡಿ, ಇಂಡಿ ಮುಂತಾದ ತಾಲೂಕು
ಗಳಲ್ಲಿ ಶಿರಸ್ತೇದಾರ ಕೆಲಸಮಾಡಿ ೧೯೦೩ ರಲ್ಲಿ ಪೆನಶನ್
ತೆಗೆದುಕೊಂಡರು ನಡುನಡುವೆ ಮಹಾಲಕರಿ ಮತ್ತು
ಮಾಮಲೇದಾರರಾಗಿಯೂ ಅನೇಕವರ್ಷ ಕೆಲಸ ಮಾಡಿ
ದರು. ಆದರೆ, ಅವರು ಇಂಗ್ಲಿಷ ಪರೀಕ್ಷೆ ಪಾಸಾಗಿದ್ದಿಲ್ಲ
ವಾದ್ದರಿಂದ ಅವು ಕಾಯಂ ಸಿಗಲಿಲ್ಲ ಅವರಿಗೆ ತಿಂಗಳಿಗೆ
೫೦ ರೂಪಾಯಿ ಸಂಬಳವಿತ್ತು ಕೊನೆಕೊನೆಗೆ ಮಾತ್ರ
೬೦ ರೂಪಾಯಿ ಆಗಿತ್ತು ಅವರು ೧೯೧೮ನೆಯ ಇಸ್ವಿ
ಯಲ್ಲಿ ತೀರಿಕೊಂಡರು ಅವರಿಗೆ ನಾಲ್ಕುಜನ ಗಂಡು
ಮಕ್ಕಳು, ಇಬ್ಬರು ಹೆಣ್ಣುಮಕ್ಕಳು ನಾನೇ ಹಿರಿಯವನು.
ಈಗ ಉಳಿದಿರುವವನು ನಾನೊಬ್ಬನೇ ನನ್ನ ಒಬ್ಬ ತಮ್ಮನ
ಹೊರತಾಗಿ ಮಿಕ್ಕೆಲ್ಲರಿಗೂ ಸಂತತಿಯಿದೆ.

ನಮ್ಮ ಅಜ್ಜಂದಿರಾದ ವೆಂಕಟರಾಯರು ಶ್ರೀಮಂತರಿ
ದ್ದರೂ, ಅವರು ತೀರಿಕೊಂಡಾಗ ನಮ್ಮ ತಂದೆಯವರು
ಚಿಕ್ಕವರಿದ್ದುದರಿಂದ, ಜಂಗಮ ಆಸ್ತಿ ವಿಶೇಷ ಕೈಗೆ ಹತ್ತ
ಲಿಲ್ಲ. ಭೀಮರಾಯರು ಚಿಕ್ಕ ನವಕರಿಯಲ್ಲಿದ್ದರೂ ಚಾಣಾ
ಕ್ಷರೂ ವ್ಯವಹಾರಕುಶಲರೂ ಮಿತವ್ಯಯಿಗಳೂ ಇದ್ದುದ
ರಿಂದ, ಸ್ವಂತ ಶ್ರಮದಿಂದ ತಮ್ಮ ಜೀವಮಾನದಲ್ಲಿ
ಹೊಲದ ವಾರ್ಷಿಕ ಉತ್ಪನ್ನವನ್ನು ೩-೩॥ ಸಾವಿರ
ರೂಪಾಯಿಗಳವರೆಗೆ ಬೆಳಿಸಿದರು. ನಾನು ಹುಟ್ಟಿದ ಮರು

ವರುಷವೇ ಆಲೂರ ಜಹಾಗೀರಿಯನ್ನು ಅಡವು ಹಿಡಿದರು. ಅದು ಮುಂಚೆ, ಅವರ ಸೋದರಮಾವಂದಿರ ಮಕ್ಕಳಾದ ಹಣಮಂತರಾವ ಬಲಕುಂದಿ ಇವರ ಹೆಸರಲ್ಲಿ ಇತ್ತು. ನಾನು ವಯಸ್ಸಿಗೆ ಬಂದಕೂಡಲೆ ೧೯೯೯ರಲ್ಲಿ ನನ್ನ ಹೆಸರಲ್ಲಿ ಆಯಿತು ೩೦-೩೨ ವರುಷ ನಮ್ಮ ವಹಿವಾಟಿ ಯಲ್ಲಿದ್ದಬಳಿಕ ಆ ಒತ್ತೆಯನ್ನು ಜಹಾಗೀರದಾರ ಮನೆ ತನದವರು ಬಿಡಿಸಿಕೊಂಡರು. ಭೀಮರಾಯರು ಪೆನಶನ್ ತೆಗೆದುಕೊಂಡಬಳಿಕ ಸುಮ್ಮನೆ ಕುಳಿತುಕೊಳ್ಳಲಿಲ್ಲ ಇಬ್ಬರು ಮಕ್ಕಳುಗಳ ಕಡೆಯಿಂದ ಧಾರವಾಡದಲ್ಲಿ ದಲಾಲಿ ಅಂಗಡಿ, ಜವಳಿ ಅಂಗಡಿ ತೆಗಿಸಿದರು ಆಲೂರಲ್ಲಿ ಮತ್ತೊಬ್ಬ ಮಗ ನಿಂದ ೮ ಎತ್ತಿನ ಕಮತ ಇಡಿಸಿದರು. ಅವು ಅವರ ಮೇಲ್ವಿಚಾರಣೆಯಲ್ಲಿ ೧೮-೨೦ ವರುಷ ಚೆನ್ನಾಗಿ ನಡೆದವು. ಸಾಯುಸಾಯುವ ಮುಂದೆ ಅನಂತರಾವ ದಾಭಡೆ ಇವ ರಿಂದ ಸರಾಫಿ ಅಂಗಡಿ ಹಾಕಿಸಿದ್ದರು ಹೀಗೆ ಅವರು ಮರಣಹೊಂದುವವರೆಗೆ, ಅವರ ಕಾಲಗುಣದಿಂದ ಸಾಂಪ ತ್ತಿಕ ಸ್ಥಿತಿಯು ಏರುತ್ತಲೇ ಇತ್ತು. ಅವರು ಹುಟ್ಟಿದಂದಿ ನಿಂಧ ಸಾಯುವವರೆಗೆ ಅಂದರೆ ೭೦-೭೨ ವರುಷಗಳಲ್ಲಿ ವಿಶೇಷ ಆಪತ್ತಿನ ಪ್ರಸಂಗಗಳನ್ನು ಕಂಡಿದ್ದಿಲ್ಲ ಕೊನೆಗೆ ಎರಡು ವರುಷ ಮಾತ್ರ ಇಬ್ಬರು ಗಂಡುಮಕ್ಕಳ ಹಾಗು ಒಬ್ಬ ಹೆಣ್ಣುಮಗಳ ಮರಣದಿಂದ ಅವರು ವಿಶೇಷ ದುಃಖ ವನ್ನು ಕಂಡರು. ಆವರ ಮರಣವನಂತರ ಸಾಂಪತ್ತಿಕ ಸ್ಥಿತಿಯು ಜರ್ರನೆ ಇಳಿಯಿತು. ದಲಾಲಿ ಅಂಗಡಿ ಮತ್ತು ಜವಳಿ ಅಂಗಡಿ ಮುಂತಾದವುಗಳು, ಮುಂದೆ ನಡಿಸುವವ ರಿಲ್ಲದ್ದರಿಂದ ನಿಂತುಹೋದವು. ೧೮-೨೦ ಸಾವಿರ ರೂಪಾಯಿ

ಉದ್ದರಿಗಂಟು ಮುಳುಗಿಹೋಯಿತು ನಾನು ಅವು
ಗಳನ್ನು ನಡಿಸಬಹುದಾಗಿತ್ತು. ಅಲ್ಲದೆ ಬೇರೆಯವರು ಮೃತ್ಯು
ಪತ್ರಮಾಡಿ ನನ್ನನ್ನು ಟ್ರಸ್ಟೀ ಆಗಿಯೂ ಸೇರಿಸಿದ್ದರು
ಆದರೆ, ನಾನು ವಕೀಲಿಬಿಟ್ಟು ಸಾರ್ವಜನಿಕ ಕಾರ್ಯದಲ್ಲಿ
ಆದೇ ನೇರಿದ್ದೇನಾದ್ದರಿಂದ, ಆ ಕಾರ್ಯವನ್ನು ಕೈಕೊಳ್ಳಲಿಕ್ಕೆ
ಮನಸ್ಸು ಆಗಲಿಲ್ಲ ಇರಲಿ, ಆ ಮಾತು ಬೇರೆ

ಭೀಮರಾಯರ ನಿಲವು ೫ ಫೂಟು ೬ ಇಂಚು ಪ್ರಕೃತಿ
ಸುಪುಷ್ಟ, ಬುದ್ಧಿಯಲ್ಲಿ ಬಲಿಷ್ಠರು ಸ್ವಭಾವ ಮುಗ್ಧ
ಮತ್ತು ಗಂಭೀರ, ಆದರೆ ಆನಂದ ಮೂರ್ತಿ ಅವರು
ವಿಶುದ್ಧವಾದ ನೈತಿಕ ಆಚರಣೆಯುಳ್ಳವರು ಆಚಾರ
ಶೀಲರಾದರೂ ಕರ್ಮಠರಲ್ಲ ಸ್ವಾಭಿಮಾನಿಗಳು, ಸ್ವದೇಶ
ಪ್ರೇಮಿಗಳು, ವಾಚನಪ್ರಿಯರು, ಸ್ವಾವಲಂಬಿಗಳು ಸದಾ
ಕರೆಯಲ್ಲಿದ್ದರೂ ಒಬ್ಬರಿಗೆ 'ಜೀಯಾ' 'ಜೀಯಾ' ಅನ್ನ
ಲಿಲ್ಲ. ದರ್ಶನವಂತರಾದರೂ ಲೋಕಪ್ರಿಯರು ಸಾರ್ವಜನಿಕ
ಕಾರ್ಯಗಳ ಕಡೆಗೆ ಪ್ರವೃತ್ತಿಯುಳ್ಳವರು ಉಡಿಗೆ ತೊಡಿಗೆ
ತೀರ ಸಾದಾ. ಏಕಾಂತಪ್ರಿಯರು ಮುನ್ನುಗ್ಗುವ ಸ್ವಭಾವ
ದವರಲ್ಲ. ಕಲಾದಗಿಯಲ್ಲಿದ್ದಾಗ (೧೮೭೭), ಅಲ್ಲಿಯ ಹಾಗ್
(Hogg) ಎಂಬೊಬ್ಬ ಕಲೆಕ್ಟರರು ತಾವು ಕೊಟ್ಟ ಸರ್ಟಿ
ಫಿಕೇಟಿನಲ್ಲಿ, ಅವರು ಬಹಳ ಬುದ್ಧಿವಂತರು ಉದ್ಯೋಗಿ
ಗಳು ಮುಂತಾಗಿ ವರ್ಣಿಸಿ ಕೊನೆಗೆ "He is very shy
and diffident, but for all that he knows his work
thoroughly" ಅಂದರೆ ಭೀಮರಾಯರು ಅತಿ ಸಂಕೋಚ
ವೃತ್ತಿಯವರೂ ತಮ್ಮ ಶಕ್ತಿಯನ್ನು ಇದ್ದದ್ದಕ್ಕಿಂತ ಕಡಿಮೆ
ತಿಳಿದುಕೊಳ್ಳುವವರೂ ಇದ್ದರೂ ಅವರು ತಮ್ಮ ಕೆಲಸದಲ್ಲಿ

ಸಂಪೂರ್ಣವಾಗಿ ದಕ್ಷರಿದ್ದಾರೆಂದು ಹೇಳಿದ್ದಾರೆ ತಾವು ಒಬ್ಬರ ಉಸಾಬರಿಗೆ ಹೋಗುತ್ತಿದ್ದಿಲ್ಲ ಅನ್ಯರನ್ನು ತಮ್ಮ ಉಸಾಬರಿಗೆ ಬರಗೊಡುತ್ತಿದ್ದಿಲ್ಲ ಹೀಗಿದ್ದುದರಿಂದಲೇ ಅವರು ಹೋದಹೋದಲ್ಲಿ ಹೆಸರು ಪಡೆದರು ಮತ್ತು ವಿಶೇಷತಃ ತಮ್ಮ ಕುಶಲತೆಯಿಂದಲೇ ದೊಡ್ಡ ಆಸ್ತಿಯನ್ನು ಗಳಿಸಿದರು ಹಾಗೆ ನೋಡಿದರೆ, ತಾಲೂಕಿಗೆ ಒಬ್ಬ ಶಿರಸ್ತೇದಾರರು ಇಷ್ಟೇ ಇದ್ದರು ಆದರೆ ಇವರಂತೆ ಗಳಿಸಿದವರು ತೀರ ವಿರಳ ಅವರ ವಿಷಯದಲ್ಲಿ ನನಗೆ ಪೂಜ್ಯ ಬುದ್ಧಿ ಇರುವುದೇನೋ ನಿಜ ಆದರೆ ನಾನು ಮಾಡಿದ ಅವರ ಸ್ವಭಾವವರ್ಣನೆಯು ಬರೇ ಪಕ್ಷಪಾತದಿಂದ ಮಾಡಿದ್ದಲ್ಲವೆಂಬುದು ಮುಂದೆ ನನ್ನ ಜೀವನಸ್ಮೃತಿಗಳಲ್ಲಿ ಬರುವ ಅವರ ಸಂಬಂಧದ ಅನೇಕ ಉಲ್ಲೇಖಗಳಿಂದ ಸ್ಪಷ್ಟವಾಗುವುದು

ನನ್ನ ಸ್ಮೃತಿಯಿಂದ, ನನಗೆ ತಾಯಿಯೂ ಉತ್ತಮಳೇ ದೊರೆತಿದ್ದಳು ಅವಳು ಸೊಲ್ಲಾಪುರದ ದೇಶಪಾಂಡೆ ಮನೆತನದವಳು ಅವಳ ಕಕ್ಕನ ಮಕ್ಕಳು ಈಗಲೂ ವಿಠೋಬದೇವರ ಗುಡಿಯ ಹತ್ತಿರ ತಮ್ಮ ದೇಶಪಾಂಡೆ ವಾಡೆಯಲ್ಲಿ ಇರುವರು ನಮ್ಮ ಆಜಿ ಘೋಂಡೂಬಾಯಿ ಇವರು ಚಕ್ರಲಿಕೋಟೆಯ ಹತ್ತಿರ ಮಸನಂಗದವರು ನಮ್ಮ ತಾಯಿಯ ತಂದೆ ನಾನಾರಾಯರು ಕಾರಕೂನರಿದ್ದರು ಅವರು ಕೇವಲ ಸಾಧುಗಳೆಂದು ಅವರ ವಿಷಯವಾಗಿ ಎಲ್ಲರದೂ ಪೂಜ್ಯ ಬುದ್ಧಿ ಇತ್ತು ನಮ್ಮ ತಾಯಿಯೂ ಅವರಂತೆಯೇ ಕೇವಲ ಸಾಧ್ವೀಶಿರೋಮಣಿಯು ವಿಶೇಷ ಕಲಿತವ

ಳಲ್ಲಿ ಶ್ರೀಮಂತಳಾಗಿದ್ದರೂ ಬಡವರಂತೆಯೇ ಇರುತ್ತಿದ್ದಳು. ನಿಷ್ಕಪಟಿಯು, ಸುಶೀಲಳು, ಶಾಂತಮುದ್ರೆಯುಳ್ಳವಳು. ಭೋಳೇ ಸ್ವಭಾವದವಳಲ್ಲವಿದ್ದರೂ ಒಳ್ಳೇ ಸ್ವಭಾವದವಳು ನಮ್ಮ ಮನೆಯಲ್ಲಿ ನಮ್ಮ ತಾಯಿಯ ತಾಯಿ ವಿರಾಬಾಯಿ, ತಂದೆಯ ತಾಯಿ ರಾಧಾಬಾಯಿ, ದೂರದ ಸಂಬಂಧದವಳಾದ ರಂಗವ್ವ, ಹಾನಗಲ್ಲಿನ ಕೃಷ್ಣಪ್ಪ ಬರಹಗಾರ ಹೀಗೆ ನಾನಾತರಹದ ಸ್ವಭಾವದ ಜನರು ಇದ್ದರೂ ಅವರೆಲ್ಲರನ್ನೂ ತೂಗಿಸಿಕೊಂಡು ಹೋಗುತ್ತಿದ್ದಳು ಅವಳು ತೀರ ಮೆತ್ತನ್ನ ಸ್ವಭಾವದವಳು ನಮ್ಮ ತಂದೆ ತುಸು ಬೈದ ಕೂಡಲೆ ಎಂಟು ದಿವಸ ಮುಳುಮುಳು ಅಳುತ್ತ ಕುಳಿತುಕೊಳ್ಳುತ್ತಿದ್ದಳು ನಮ್ಮ ತಂದೆಯು ದರ್ಶನವರಾದುದರಿಂದ ಒಂದೊಂದು ಸಲ ೮-೧೦ ದಿವಸಗಳ ವರೆಗೆ ಮಾತು ಬಿಡುತ್ತಿದ್ದರು ಅಷ್ಟು ದಿವಸ ಅವಳಿಗೆ ಅರ್ಧ ಉಪವಾಸವೇ ಅವಳು ತನ್ನ ಹತ್ತಿರ ಒಂದು ದುಡ್ಡು ಸಹ ಇಟ್ಟುಕೊಳ್ಳುತ್ತಿದ್ದಿಲ್ಲ ನಮಗೆ ಸಂತೆಗೆ ದುಡ್ಡು ಬೇಕಾದರೆ, ತಂದೆಯವರನ್ನು ಕೇಳಿ ಅವರಿಂದ ಇಸುಗೊಂಡೇ ಕೊಡಬೇಕು ನಮ್ಮ ತಂದೆಗೆ ಬೀಳುಹೊಲ ಹಿಡಿದು ಹಸನ ಮಾಡಿಸಿ ಉತ್ಪನ್ನ ಬೆಳಿಸುವ ಹವ್ಯಾಸ ಬಹಳ. ಅದಕ್ಕಾಗಿ ಅವರು ಮೇಲಿಂದ ಮೇಲೆ ನಮ್ಮ ತಾಯಿಯ ಮೈಮೇಲಿನ ೬-೭ ಶೇರು ಬಂಗಾರವನ್ನು ಮಾರಿ ಹೊಲ ಹಿಡಿಯುತ್ತಿದ್ದರು. ಪುನಃ ಮಾಡಿಸುತ್ತಿದ್ದರು, ಪುನಃ ಮಾರುತ್ತಿದ್ದರು ಒಂದು ಸಲ, ಅವಳು ತನ್ನ ಕೈಯೊಳಗಿನ ಬಂಗಾರದ ತೋಡೆಯನ್ನು ಕೊಡದೆ ಹಟ ಹಿಡಿದದ್ದು ಮಾತ್ರ ನನ್ನ ನೆನಪಿನಲ್ಲಿದೆ. ಅವಳು ಬಲು ಬೇಗ

ಅಂದರೆ ೧೯೦೦ನೆಯ ಇಸ್ವಿಯಲ್ಲಿಯೇ ಜ್ವರದಿಂದ ತೀರಿ ಕೊಂಡಳು

ನನ್ನ ತಾಯಿತಂದೆಗಳ ಸ್ವಭಾವವು ಬಲುಮಟ್ಟಿಗೆ ನನ್ನಲ್ಲಿ ಪ್ರತಿಫಲಿತವಾಗಿರುವುದನ್ನು ವಾಚಕರು ಮುಂದೆ ಕಾಣಬಹುದು ನನ್ನ ಜೀವನಸ್ಮೃತಿಯಲ್ಲಿ ನಾನು ಸಂದರ್ಭಾನುಸಾರವಾಗಿ ಅವರ ಬಗ್ಗೆ ಉಲ್ಲೇಖಿಸುವವನೇ ಇದ್ದೇನೆಯಾದ್ದರಿಂದ ಇಲ್ಲಿ ಹೆಚ್ಚಿಗೆ ಬೇಡ ನನ್ನಲ್ಲೇನಾದರೂ ಗುಣಗಳಿದ್ದರೆ ಅದು ಅವರ ಪುಣ್ಯದ ಫಲ ಅವಗುಣಗಳಿದ್ದರೆ ಅವಕ್ಕೆ ನಾನೇ ಹೊಣೆಗಾರನು ಹೀಗೆ ಪೂಜ್ಯರಾದ ತಾಯಿತಂದೆಗಳಿಗೆ ಶ್ರದ್ಧಾಂಜಲಿಯನ್ನು ಕೊಟ್ಟು ಅವರ ಆಶೀರ್ವಾದವನ್ನು ಬೇಡಿ ಮುಂದೆ ಸಾಗುವೆನು

ನಾನು ವಿಜಾಪುರದಲ್ಲಿ ೧೨ನೆಯ ಜುಲೈ ೧೮೮೦ನೆಯ (ಆಷಾಢ ಶುದ್ಧ ಪಂಚಮಿಯ) ದಿವಸ ಹುಟ್ಟಿದೆನು ೧೮೮೭ರಲ್ಲಿ ನವಲಗುಂದದಲ್ಲಿ ಶಾಲೆಗೆ ಹೋದೆನು ಗದಗಿನಲ್ಲಿ ಕನ್ನಡ ೨-೩ ಇಯತ್ತೆಗಳನ್ನು, ಹಾನಗಲ್ಲಿನಲ್ಲಿ ೪ನೆಯ ಇಯತ್ತೆ ಇಂಗ್ಲಿಷ ೧ನೆಯ ಇಯತ್ತೆಗಳನ್ನು ಮುಗಿಸಿಕೊಂಡು ೧೮೯೧ರಲ್ಲಿ ಧಾರವಾಡಕ್ಕೆ ಕಲಿಯಲಿಕ್ಕೆ ಬಂದೆನು. ಧಾರವಾಡ ಸರಕಾರಿ ಹಾಯಸ್ಕೂಲಿನಿಂದ ೧೮೯೭ನೆಯ ಇಸ್ವಿಯಲ್ಲಿ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯನ್ನು ಪಾಸಾಗಿ ಒಂದು ವರುಷ ಪ್ಲೇಗಿನ ಮೂಲಕ ಕಾಲೇಜಕ್ಕೆ ಹೋಗದೆ ಮನೆಯಲ್ಲಿದ್ದು, ಮುಂದೆ ಫರ್ಗ್ಯೂಸನ್ ಕಾಲೇಜದಲ್ಲಿ ಕಲಿತು, ೧೯೦೩ನೆಯ ಇಸ್ವಿಯಲ್ಲಿ ಬಿ ಎ. ಪರೀಕ್ಷೆಯನ್ನು ೨ನೆಯ ವರ್ಗದಲ್ಲಿ ಪಾಸಾದೆನು. ೧೯೦೪ರಲ್ಲಿ ಒಂದನೆಯ ಎಲ್‌ಎಲ್, ಬಿ. ಪರೀಕ್ಷೆಯನ್ನೂ ೧೯೦೫ರಲ್ಲಿ

ಎರಡನೆಯ ಎಲ್‌ಎಲ್, ಬಿ ಪರೀಕ್ಷೆಯನ್ನು ಪಾಸಾದೆನು ಧಾರವಾಡದಲ್ಲಿ ೧-೧॥ ವರುಷ ವಕೀಲಿಯನ್ನು ನಡಿಸಿದನಂತರ ವಕೀಲಿಯನ್ನು ಬಿಟ್ಟು ರಾಷ್ಟ್ರೀಯ ಶಾಲೆಯನ್ನು ತೆಗೆದು ನಡಿಸಿದೆನು ಅದು ನಿಂತುಹೋದ ಬಳಿಕ ೧೯೧೧ರ ಸುಮಾರಕ್ಕೆ ಶ್ರೀ ವೆಂಕಟರಾವ ಮುದವೇಡಿಕರ ಇವರೊಡನೆ ಪಾಲುಗಾರಿಕೆಯಿಂದ ವಕೀಲಿಯನ್ನು ನಡಿಸಿ ೧೯೨೦ ನೆಯ ಇಸ್ವಿಯಲ್ಲಿ ಪುನಃ ವಕೀಲಿಯನ್ನು ಬಿಟ್ಟೆನು. ಸುಮಾರು ೨೫-೨೬ ವರ್ಷಗಳನ್ನು ಸಾರ್ವಜನಿಕ ಕಾರ್ಯಗಳಲ್ಲಿ ಕಳೆದು ಈಗ ೮-೧೦ ವರುಷಗಳಿಂದ ಏಕಾಂತಜೀವನವನ್ನು ಕೈಕೊಂಡು ಗೀತಾಭ್ಯಾಸದಲ್ಲಿ ಕಾಲಕಳೆಯುತ್ತಿರುವೆನು ಇವರ ವಿವರಗಳು ಮುಂದೆ ಬಂದೇ ಬರುವವು ನನ್ನ ಸಾಂಸಾರಿಕ ಜೀವನವೂ ಸಾರ್ವಜನಿಕ ಜೀವನದಂತೆಯೇ ಬಿಚ್ಚಿದ್ದಾಗಿದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು

ನನ್ನ ಮೊದಲನೆಯ ಲಗ್ನವು ನಾನು ೧೫-೧೬ ವರ್ಷದವನಿದ್ದಾಗ ಅಂದರೆ ೧೮೯೬ರ ಫಬ್ರುವರಿಯಲ್ಲಿ ಬಾಗಲಕೋಟೆಯ ಶ್ಯಾಮರಾವ ಮಂಗಳವೇಡಿಕರ ಇವರ ಹಿರಿಯ ಮಗಳೊಡನೆ ಆಗಿತ್ತು. ಅವಳ ಹೆಸರು ಲಕ್ಷ್ಮೀಬಾಯಿ ಅವಳು ನನ್ನ ವಿದ್ಯಾರ್ಥಿದಸೆಯಲ್ಲಿಯೇ ೧೯೦೩ರಲ್ಲಿ ತೀರಿಕೊಂಡಳು ಈಗಿನ ಹೆಂಡತಿಯ ಹೆಸರೂ ಲಕ್ಷ್ಮೀಬಾಯಿ ಅವಳು ಬಾಗಲಕೋಟೆಯ ವೆಂಕಣ್ಣನಾಯ್ಕ ಮಿರಜಿ ಇವರ ಮಗಳು ನನಗೆ ನಾಲ್ಕುಮಂದಿ ಗಂಡುಮಕ್ಕಳೂ ಒಬ್ಬಳು ಹೆಣ್ಣುಮಗಳೂ ಇದ್ದಾರೆ. ಇದು ನನ್ನ ಸಾಂಸಾರಿಕ ಜೀವನದ ಸಂಕ್ಷಿಪ್ತ ಚಿತ್ರ.

## ೩ನೆಯ ಪ್ರಕರಣ

# ನನ್ನ ಬಾಲ್ಯ (೧೮೮೦-೧೮೯೭)

ನನ್ನ ಬಾಲ್ಯ ಮತ್ತು ಪ್ರೌಢವಿದ್ಯಾರ್ಥಿದಶೆಗಳಲ್ಲಿ ನನ್ನ ಜೀವಿತಕಾರ್ಯದ ಬೀಜಗಳು ಹೇಗೆ ಬಿತ್ತಲ್ಪಟ್ಟುವು ವೆಂಬುದನ್ನು ಹೇಳುವುದೇ ಈ ಪ್ರಕರಣದ ಮತ್ತು ಮುಂದಿನ ಅಂದರೆ ೪ನೆಯ ಪ್ರಕರಣದ ಉದ್ದೇಶ.

ಮನುಷ್ಯನ ಮನಸ್ಸು ಒಂದು ಕಮೆರಾ ಇದ್ದಂತೆ, ಅಥವಾ ಒಂದು ಸ್ಮರಣಾಗ್ರಾಹಕತಟ್ಟೆ (Plate) ಇದ್ದಂತೆ. ಹಿಂದಿನ ಅನೇಕ ಜನ್ಮಗಳ ಸಂಸ್ಕಾರ (Impression) ಗಳನ್ನು ಕಟ್ಟಿಕೊಂಡು ಹುಟ್ಟಿಬಂದ ಪ್ರಾಣಿಯು ಆತನು. ತಾಯಿಯ ಬಸುರಿನಲ್ಲಿ ಬಂದ ಐದನೆಯ ತಿಂಗಳಿಂದಲೇ ಆತನ ಮಿದುಳಿನ ಮೇಲೆ ಸಂಸ್ಕಾರಗಳು ಮೂಡಲಿಕ್ಕೆ ಪ್ರಾರಂಭವಾಗುತ್ತವೆ. ಪ್ರತಿಯೊಂದು ಸಂಗತಿಯು ನಡೆದಾಗಲು ಆತನ ಸ್ಮೃತಿಮಿದುಳಿನ ಮೇಲೆ ಮೂಡಿಯೇ ಮೂಡುತ್ತದೆ. ಆದರೆ, ಅನೇಕ ನೆಳಲುಗಳು ಮುಂದೆ ಅಳಿಸಿಹೋಗುತ್ತವೆ. ಬಲವಾಗಿ, ಒತ್ತಿಯೊತ್ತಿ ಮೂಡಿದ ನೆಳಲುಗಳು ಮಾತ್ರ ಬಲುದಿವಸ ಉಳಿಯುತ್ತವೆ. ತೆಳ್ಳಗೆ ಬಣ್ಣ ಕೊಟ್ಟರೆ, ಅದು ಹಾರಿ ಹೋಗುವುದಿಲ್ಲವೆ? ಪಾಟಿಯೊಳಗಿನ ಮಸಿಯು ಗಾಳಿಗೆ ಒಣಗಿಹೋಗುವುದಿಲ್ಲವೆ? ಸ್ಮರಣಶಕ್ತಿಯೆಂದರೆ ಮತ್ತೇನೂ ಅಲ್ಲ, ಹೀಗೆ ಮಿದುಳಿಗೆ ಬಲವಾಗಿ ಬಲುದಿವಸ ಬಾಳುವ ಬಣ್ಣಕೊಡುವುದು. ಕೆಲವರಿಗೆ ಕೆಲವು ಮಾತುಗಳು ಮಾತ್ರವೇ ನೆನಪಿನಲ್ಲಿ ಉಳಿಯುವುದಕ್ಕೆ ಇದೇ ಕಾರಣ. ದೊಡ್ಡದೊಡ್ಡ ಸಂಗತಿಗಳು ಕೂಡ ಒಮ್ಮೊಮ್ಮೆ ಮರೆತುಹೋಗುತ್ತವೆ. ಅದೇ, ಕೆಲವು ಚಿಕ್ಕಚಿಕ್ಕ

ಸಂಗತಿಗಳು ಬಲುದಿವಸ ಮನಸ್ಸಿನಲ್ಲಿ ಉಳಿಯುತ್ತವೆ
ಯಾವನೊಬ್ಬನು ನಮ್ಮನ್ನು ಬೈದುದು ಮನಸ್ಸಿನಲ್ಲಿ ಬಲು
ದಿವಸ ಕಟಿಯುತ್ತಿರುತ್ತದೆ ಆಪ್ತೇಷ್ಟರ ಮರಣದಿಂದ
ಮನಸ್ಸಿಗೆ ಬರೆಕೊಟ್ಟಂತಾಗಿ ಅದರ ಗಾಯವು ಅನೇಕ
ವರ್ಷ ಉಳಿಯುವುದನ್ನು ಯಾರು ಕಂಡಿಲ್ಲ? ದೊಡ್ಡ
ವರು ದೊಡ್ಡವರಾಗುವುದಕ್ಕೂ ಹುಚ್ಚರು ಹುಚ್ಚರಾಗುವು
ದಕ್ಕೂ ಕೂಡ ಬಲುಮಟ್ಟಿಗೆ ಈ ಸಂಸ್ಕಾರಗಳೇ ಕಾರಣ
ಗರ್ಭದ ಕಾಲಕ್ಕೆ ವಿಷಮಜ್ವರಾದಿಗಳು ಬಂದಮೂಲಕ
ಅನೇಕರು ಕುರುಡರೂ ಮೂಕರೂ ಆಗಿ ಹುಟ್ಟಿದ್ದನ್ನು
ನಾವು ನೋಡುವುದಿಲ್ಲವೆ? ಅಭಿಮನ್ಯುವಿಗೆ ಗರ್ಭದಲ್ಲಿಯೇ
ಸಂಸ್ಕಾರವಾದುದರ ಮರ್ಮವೂ ಇದೇ ಈ ಸಂಸ್ಕಾರಗಳು
ಬಾಲ್ಯದಲ್ಲಿ ವಿಶೇಷ ಬಲವಾಗಿ ಮೂಡುತ್ತವೆ ಮಿದುಳು
ಆಗ ಬಲು ಮಿದುವು ಇರುತ್ತದೆ ಆಗ ನಮ್ಮ ಸುದೈವದಿಂದ
ಒಳ್ಳೆಯ ಸಂಸ್ಕಾರಗಳು ಉಂಟಾದರೆ, ಅವು ನಮ್ಮ ಆಯು
ಷ್ಯದ ಮುಂದಿನ ಗುರಿಯನ್ನು ನಿರ್ಣಯಿಸುತ್ತವೆ ಗರ್ಭಾ
ಧಾನ ಮೊದಲ್ಗೊಂಡು ನಮ್ಮಲ್ಲಿ ಸಂಸ್ಕಾರ ಪದ್ಧತಿಗಳನ್ನಿಡು
ವುದಕ್ಕೆ ಇದೇ ಕಾರಣ ಇಂಥ ಸಂಸ್ಕಾರಗಳು ನಮ್ಮಮೇಲೆ
ಅನೇಕ ಕಾರಣಗಳಿಂದುಂಟಾಗುತ್ತವೆ ಹಿಂದಿನ ಜನ್ಮಗಳ
ಸಂಸ್ಕಾರಗಳು ಕೆಲವು; ತಾಯಿತಂದೆಗಳ ರಕ್ತದಿಂದ
ಬಂದ ಸಂಸ್ಕಾರಗಳು ಕೆಲವು; ಕಾಲಮಾನದಿಂದಲೂ ಸುತ್ತ
ಲಿನ ಪರಿಸ್ಥಿತಿಯ ಮೂಲಕವೂ ಉಂಟಾದ ಸಂಸ್ಕಾರಗಳು
ಕೆಲವು; ಶಿಕ್ಷಣದ ಮೂಲಕ ಉಂಟಾದ ಸಂಸ್ಕಾರಗಳು
ಕೆಲವು. ಇವೆಲ್ಲವೂ, ಆಯಾ ಜೀವನ ಮೂಲಸ್ವರೂಪಕ್ಕನು
ಸರಿಸಿ, ಭಿನ್ನಭಿನ್ನ ಜನರ ಮೇಲೆ ಭಿನ್ನಭಿನ್ನ ಒಟ್ಟು

ಪರಿಣಾಮ (Resultant) ವನ್ನುಂಟುಮಾಡುತ್ತವೆ ಗೀತೆ ಯಲ್ಲಿ ಹೇಳಿದಂತೆ, ಒಟ್ಟು ಐದು ಕಾರಣಗಳು ಕೂಡಿ ಒಂದು ಕಾರ್ಯವಾಗುತ್ತದೆ ಅವು ಯಾವುವೆಂದರೆ ೧ ಜೀವನ ಮೂಲಸ್ವರೂಪ (ಕರ್ತಾ) ೨ ಅಧಿಷ್ಠಾನ (Heridity) ೩ ಕರಣ ಅಂದರೆ ಉಪಸಾಮಗ್ರಿ ೪ ವಿವಿಧ ವ್ಯಾಪಾರಗಳು, ಅಂದರೆ ಚಲನವಲನಾದಿಗಳು ೫ ದೈವ ಅಂದರೆ ಅದೃಷ್ಟ

ಈ ತತ್ವದಮೇರೆಗೆ, ನನ್ನ ಬಾಲ್ಯದಲ್ಲಿ ಬಲವಾಗಿ ಮೂಡಿದ ಸಂಸ್ಕಾರಗಳು ಯಾವವು, ಅವು ಮುಂದೆ ನನ್ನ ಜೀವನಕ್ರಮವನ್ನು ಹೇಗೆ ನಿಶ್ಚಯಿಸಿದವು, ಎಂಬುದನ್ನು ಹೇಳುತ್ತೇನೆ ನಾನು ಆಗಿನ ಕಾಲದ ಯಾವತ್ತು ಸ್ಮೃತಿ ಗಳನ್ನು ಹೇಳಹೋಗುವುದಿಲ್ಲ ನನ್ನ ಜೀವನದ ಮೇಲೆ ಪರಿಣಾಮವನ್ನುಂಟುಮಾಡಿದ ಸ್ಮೃತಿಗಳಲ್ಲಿ ಕೆಲವನ್ನು ಮಾತ್ರವೇ ಈ ಪ್ರಕರಣದಲ್ಲಿ ಕೊಡುವೆನು

೧೮೮೦ರಲ್ಲಿ ನಾನು ಹುಟ್ಟಿದೆನು ಅಲ್ಲಿಂದ ೬-೭ವರುಷ ಗಳವರೆಗಿನ ಸಂಸ್ಕಾರಗಳು ನನ್ನ ಸ್ಮೃತಿಯಲ್ಲಿ ಇಲ್ಲ ನವಲಗುಂದದಲ್ಲಿ ನಾನು ಕನ್ನಡ ಶಾಲೆಗೆ ಹೋಗುತ್ತಿ ದ್ದಾಗ, ನಮ್ಮ ತಂದೆಯವರು ಆ ಊರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ನಮ್ಮ ತಂದೆಯ ಒಲವು ಸಾರ್ವಜನಿಕ ಜೀವನದ ಕಡೆಗೆ ಇತ್ತೆಂದು ಹೇಳಿದೆನಷ್ಟೆ ಅದಕ್ಕೆ ಇದೊಂದು ಉದಾಹರಣೆ ವೇ|| ತಮ್ಮಣಶಾಸ್ತ್ರಿ ಗಳೆಂಬವರು ಅದಕ್ಕೆ ಅಧ್ಯಾಪಕರು ಅವರು ನನಗೆ ಅಮರ ಕೋಶಾದಿಗಳನ್ನು ಕಲಿಸಿದರು ಹಿಂದುಳಿದು ಕೆಲಸ ಮಾಡುವುದು ನಮ್ಮ ತಂದೆಯ ಸ್ವಭಾವ. ಆ ಮೇರೆಗೆ

ಅವರು ತಾವು ಕೂಡಿಸಿದ ಫಂಡನ್ನು ಒಬ್ಬ ಸಾಹುಕಾರರ ಹೆಸರಿನಲ್ಲಿ ಇಟ್ಟಿದ್ದರು ನಾನು ದೊಡ್ಡವನಾದಬಳಿಕ, ಆ ಫಂಡಿನ ಸಂಬಂಧನಾಗಿ ನವಲಗುಂದದ ಜನರಲ್ಲಿ ಉಂಟಾದ ತಂಟೆಯನ್ನು ನಾನು ತೀರಿಸಬೇಕೆಂದೂ ನಮ್ಮ ತಂದೆಯವರೇ ಅದನ್ನು ಕೂಡಿಸಿದ್ದುದರಿಂದ ನಾನು ಅವರ ವ್ಯವಸ್ಥೆಯಲ್ಲಿ ಕೈ ಹಾಕಬೇಕೆಂದೂ ಕೆಲವರು ಧಾರವಾಡದ ವರೆಗೆ ಬಂದು ಕೇಳಿದರು. ಆದರೆ ನಮ್ಮ ತಂದೆಯ ಹೆಸರಿನಿಂದ ಆ ಫಂಡು ಇರಲಿಲ್ಲವಾದಕಾರಣ ಅದಕ್ಕೆ ನಾನು ಒಪ್ಪಲಿಲ್ಲ

ಬಾಲ್ಯದಲ್ಲಿಯ ಸಂಸ್ಕಾರಗಳು ಒಮ್ಮೊಮ್ಮೆ ಮನುಷ್ಯನನ್ನು ಹೇಗೆ ಮೋಸಗೊಳಿಸುತ್ತವೆಂಬುದು ನನ್ನ ಆಯುಷ್ಯದೊಳಗಿನ ಒಂದು ಚಿಕ್ಕ ಸ್ಮೃತಿಯಿಂದ ಗೊತ್ತಾಗುತ್ತದೆ ನನಗೆ ೭-೮ ವರುಷದ ವಯಸ್ಸು. ನನ್ನ ಸಲುವಾಗಿ ನನ್ನ ತಂದೆಯವರು ಒಂದು ಎಳಗದ ಗಾಡಿಯನ್ನು ಇಟ್ಟಿದ್ದರು ನವಲಗುಂದದಲ್ಲಿ ಶಿಪಾಯಿಯು ನನ್ನನ್ನು ದಿನಾಲು ಊರಹೊರಗಿರುವ ಲಾಲಗಡಿ ಹನುಮಪ್ಪನ ಗುಡಿಗೆ ಕರೆದು ಕೊಂಡು ಹೋಗುತ್ತಿದ್ದನು. ಚಿಕ್ಕವರಿಗೆ ಚಿಕ್ಕ ಅಂತರವೇ ಬಲು ದೂರದ್ದಾಗಿ ತೋರುತ್ತದೆ. ಆ ಪ್ರಕಾರ ಆ ಗುಡಿಯು ಊರಹೊರಗೆ ಒಂದು ಮೈಲಿನಮೇಲೆ ಅದೆ ಎಂದು ನನಗೆ ಭಾಸವಾಗಿತ್ತು. ಆ ಊರಬಿಟ್ಟು ನಮ್ಮ ತಂದೆಯವರು ೭-೮ ವರುಷಗಳನಂತರ ಪುನಃ ನವಲಗುಂದಕ್ಕೆ ವರ್ಗವಾಗಿ ಬಂದರು. ನಾನು ಧಾರವಾಡದಲ್ಲಿ ಇದ್ದೆ. ನನ್ನ ಮಿತ್ರರು ಕೇಳಲಾಗಿ ಆ ಊರನ್ನು ನಾನು ಹಿಂದಕ್ಕೆ ನೋಡಿರುವೆನೆಂದೂ ಊರಹೊರಗೆ ಒಂದು ಒಂದುವರೆ

ಮ್ಯುಲಿಸಪೋಲಿ ಲಾಲಗಡಿ ಹನುಮಪ್ಪನ ಗುಡಿ ಇರುವು
ದೆಂದೂ ಅದರ ಗುರುತುಕೊಟ್ಟೆ. ಅವರು ಕೊಳ್ಳನೆ
ನಕ್ಕರು ಏಕೆಂದರೆ ನಿಜವಾಗಿ ಆ ಗುಡಿಯು ಒಂದೆರಡು
ಫರ್ಲಾಂಗಿನಲ್ಲಿಯೇ ಇದೆ. ಆಗ ನನಗೆ ಕೋರ್ಟಿನಲ್ಲಿ
ಸಾಕ್ಷಿಹೇಳುವ ಪ್ರಸಂಗಬಂದಿದ್ದರೆ, ನಾನು ಆಣೆಮಾಡಿ
ಅದು ಒಂದು ಒಂದೂವರೆ ಮೈಲು ದೂರದಲ್ಲಿ ಇದೆ ಎಂದು
ಹೇಳುತ್ತಿದ್ದೆ ಮತ್ತು ಸುಳ್ಳು ಸಾಕ್ಷಿಹೇಳಿದ್ದಕ್ಕಾಗಿ ನನ್ನನ್ನು
ಮ್ಯಾಜಿಸ್ಟ್ರೇಟರು ಸೆರೆಮನೆಗೆ ಅಟ್ಟುತ್ತಿದ್ದರು!

ನನ್ನ ತಂದೆಯವರಿಗೆ ದೆವ್ವಭೂತಗಳಲ್ಲಿ ವಿಶೇಷ ವಿಶ್ವಾಸ
ವಿದ್ದಿಲ್ಲ ವಿಜಾಪುರದಿಂದ ನವಲಗುಂದಕ್ಕೆ ವರ್ಗವಾಗಿ
ಬಂದಾಗ ಅಂದರೆ ೧೮೮೫-೮೬ನೆಯ ಇಸ್ವಿಯಲ್ಲಿ, ಅವರಿಗೆ
ನವಲಗುಂದದಲ್ಲಿ ಇರಲಿಕ್ಕೆ ಎಲ್ಲಿಯೂ ಪ್ರಶಸ್ತವಾದ
ಮನೆ ಸಿಗಲಿಲ್ಲ ಧಾರವಾಡದ ನರಸಪ್ಪನವರೆಂಬ ಸಾಹು
ಕಾರರದೊಂದು ಮನೆಯು ತೆರವು ಇತ್ತು. ಆದರೆ ಅದು
ದೆವ್ವನ ಮನೆ ಎಂದು ತಿಳಿದು ಅದಕ್ಕೆ ಅನೇಕ ವರುಷಗ
ಳಿಂದ ಬೀಗ ಬಿದ್ದಿತ್ತು ಜನರು ಬೇಡೆಂದರೂ ತಂದೆ
ಯವರು ಅದನ್ನು ಹಿಡಿದರು ವಿಶ್ವಾಸವಿಲ್ಲದಿದ್ದರೂ
ಅಂಜಿಕೆ ಹೋಗಿದ್ದಿಲ್ಲ ಆದಕಾರಣ, ಕೆಲವು ಓಲೆಕಾರ
ರನ್ನು ಕರೆದುಕೊಂಡು ಮಲಗಹತ್ತಿದರು ಒಂದು ದಿವಸ
ರಾತ್ರಿ ನಮ್ಮ ತಂದೆಯ ತಾಯಿಯು ಮೂತ್ರ
ಹೊಯ್ಯಲಿಕ್ಕೆ ಎದ್ದು ಬಾಗಿಲ ತೆರೆದಳು. ಬೆಳದಿಂಗಳ
ಬೆಳ್ಳನ್ನ ಬೆಳಕು. ಅವಳ ನೆಳಲು ಉದ್ದಕ್ಕೆ ಬಿದ್ದಿತ್ತು.
ಅವಳು ಭೋಳೇಸ್ವಭಾವದವಳು, ಆದರೆ ಬಹಳ ಗಟ್ಟಿ
ಗಳು. ಆಗ ಅವಳಿಗೆ ದೆವ್ವನ ಹಳವಂಡ. ಕೂಡಲೆ, ಅದು

ದೆವ್ವವೆಂದು ತಿಳಿದು, ಒಂದು ಕೋಲನ್ನು ತೆಗೆದು ಕೊಂಡು, ಒದರಾಡಿ ಚೀರಾಡಿ ಅದನ್ನು ಹೊಡೆಯ ಹೋದಳು. ಮನೆಯವರೆಲ್ಲರೂ ಗಾಬರಿಯಾಗಿ ಎಚ್ಚತ್ತರು ನಮ್ಮ ಹಿರಿಯರು ಏಕೆ ಒದರುತ್ತೀ ಎಂದು ಕೇಳಲಾಗಿ, ಈ ದೆವ್ವ ನಮ್ಮ ಮನೆಗೆ ಬರುತ್ತದೆ, ಅದಕ್ಕೆ ಹೊಡೆ ಯುತ್ತೇನೆಂದು ಹೇಳಿದಳು. ದೆವ್ವ ಎಲ್ಲಿದೆ ಎಂದು ಕೇಳಿ ದಾಗ, ಆ ನೆಳಲನ್ನು ತೋರಿಸಿದಳು ಆಗ ಎಲ್ಲರೂ ನಕ್ಕುನಕ್ಕು ಬಿದ್ದರು! ನನಗೂ ದೆವ್ವಭೂತಗಳಮೇಲೆ ವಿಶೇಷ ವಿಶ್ವಾಸವಿಲ್ಲ ನಾನು ವಕೀಲಿ ಮಾಡುವಾಗ ಕಾಮನಕಟ್ಟೆಯ ಹತ್ತರ ಇರುವ ಭವ್ಯವಾದ ಒಂದು ಮನೆ ಯನ್ನು ಒತ್ತೆಗೆ ಹಿಡಿದೆನು. ಅದೂ ದೆವ್ವನ ಮನೆಯೆಂದು ಪ್ರಸಿದ್ಧಿ. ಧಾರವಾಡದಲ್ಲಿರುವ ಹಳೆಯ ದೊಡ್ಡದೊಡ್ಡ ಹತ್ತೆಂಟು ಕಟ್ಟಡಗಳಲ್ಲಿ ಅದೊಂದು ಆದರೆ ಅದು ಅನೇಕ ವರುಷಗಳಿಂದ ಖಾಲೀ ಬಿದ್ದಿತ್ತು ಅದನ್ನು ಒತ್ತೆಗೆ ಹಿಡಿದು ಅಲ್ಲಿಯೇ ಇರಹತ್ತಿದ್ದೆನು. ಮನೆಯಲ್ಲಿ ಆಗ ೧೫-೨೦ ಜನರು. ಅಲ್ಲಿ ೭-೮ ವರುಷಗಳಲ್ಲಿ ಅನೇಕ ಬಾಣಂತಿತನಗಳಾದವು. ಯಾರಿಗೂ ಏನೂ ತೊಂದರೆಇಲ್ಲ. ಆದರೆ, ಮನುಷ್ಯನಿಗೆ ಅದೃಷ್ಟವಿದ್ದಂತೆ ಮನೆಗಳಿಗೂ ಅದು ಇರುತ್ತದೆಯೋ ಏನೋ ಯಾರು ಬಲ್ಲರು! ಮುಂದೆ ನಮ್ಮಲ್ಲಿ ಬೇರೆ ಬೇರೆಕಡೆಗೆ ಒಂದೆರಡು ವರುಷಗಳಲ್ಲಿ ೬-೭ ಜನರು ತೀರಿ ಹಾಹಾಕಾರವೆದ್ದಿತು. ನಿಜವಾಗಿ ಆ ಮನೆ ಯಲ್ಲಿಯೇ ತೀರಿಕೊಂಡವನುನನ್ನ ತಮ್ಮ ರಾಮುನೊಬ್ಬನೇ. ಆದರೂ ಆ ಮನೆಯ ಕೆಟ್ಟ ಹೆಸರು ಹೋಗಲಿಲ್ಲ. ಆ ಮನೆ ಬಿಟ್ಟು ನಾವು ಮಾಳಮಡ್ಡಿಯಲ್ಲಿ ಬಂಗ್ಲೆಯಲ್ಲಿ ಇರಲಿಕ್ಕೆ

ಹೋದೆವು ಆಗ ವಿದ್ಯಾರ್ಥಿಗಳಾಗಿದ್ದ ಮಧ್ವರಾವ ಕಬ್ಬೂರ
ಮತ್ತು ದಿವಾಕರ ಇವರು ಊರೊಳಗಿನ ಮನೆಯಲ್ಲಿದ್ದ
ನನ್ನ ಲಾಯಬ್ರರಿಯಲ್ಲಿ ಓದುತ್ತಿದ್ದರಂತೆ, ಮಲಗುತ್ತಿದ್ದ
ರಂತೆ ಅವರಿಗೆ ಯಾವ ಭಯವೂ ಇದ್ದಿಲ್ಲ ಆದರೆ, ಮುಂದೆ
ಆ ಮನೆಯಲ್ಲಿ ಯಾರೂ ಇರಲಿಕ್ಕೆ ಒಪ್ಪಲಿಲ್ಲನೆಂಬುದು
ಮಾತ್ರ ನಿಜ ಆ ಭವ್ಯವಾದ ಮನೆಯು ಮೇಲಿಸ್ವರಿಗೆ
ಯನ್ನು ಈಚೆಗೆ ಕೆಡಹಿ ಬಿಟ್ಟಿದ್ದಾರೆ! ಇರಲಿ ಮುಂದೆ ದೆವ್ವನ
ವಿಷಯವನ್ನು ಹೆಚ್ಚಿಗೆ ಅಭ್ಯಾಸಮಾಡುವ ಉದ್ದೇಶದಿಂದ,
ಶಿಶಿರಕುಮಾರ ಘೋಷರ Spiritual magazine ಕೆಲವು
ವರುಷ ತರಿಸಿ ಓದಿದೆ ಆದರೆ, ಏನೂ ನಿಶ್ಚಿತಾಭಿ
ಪ್ರಾಯಕ್ಕೆ ಬರಲಿಲ್ಲ

ಧಾರವಾಡದಲ್ಲಿ ಶುಕ್ರವಾರಪೇಟೆಯಲ್ಲಿ ನಾನು
ಒಂದು ಮನೆಕೊಂಡಿದ್ದೇನೆ ಅದಕ್ಕೂ ಹೀಗೆಯೇ
ಕೆಟ್ಟಹೆಸರು ಇತ್ತು ಅಲ್ಲಿ ನಾನು ಇರಹತ್ತಿದೆನು ನನ್ನ
ಹೆಂಡತಿ ಬಸುರಾದಳು ಆ ಮನೆಯಲ್ಲಿ ಹಡೆಯದೆ ಬೇರೆ
ಮನೆಯಲ್ಲಿ ಹಡೆಯಲಿ ಎಂದು, ಅದೇ ಮನೆಯಲ್ಲಿಯೇ
ಒತ್ತಟ್ಟಿಗೆ ಬಾಡಿಗೆಯಿಂದ ಇದ್ದ ಶ್ರೀ ಹಾವನೂರ ವೆಂಕಟ
ರಾಯರು ಕೇವಲ ಸದುದ್ದೇಶದಿಂದ ಹೇಳಿದರು. ಪ್ರತಿನಿತ್ಯ
ದೇವರ ಪೂಜೆಯಾಗಿ ದೇವರಿದ್ದ ಮನೆಯಲ್ಲಿ ದೆವ್ವಗಳು
ಇರಲಾರವೆಂದು ನಾನು ಅಂದೆನು. ನನ್ನ ಹೆಂಡತಿಯೂ
ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು, ನಾನು ಹೇಳಿದಂತೆ
ಕೇಳಿದಳು. ಕೊನೆಗೆ ಆ ಮನೆಯಲ್ಲಿಯ ಒಂದು ಕೋಣೆಯಲ್ಲಿ
ಯಾದರೂ ಅವಳು ಹಡೆಯುವುದು ಬೇಡವೆಂದು ಶ್ರೀ. ಹಾವ
ನೂರವರು ಹೇಳಿದರು. ಅವಳು ಅಲ್ಲಿಯೇ ಸುರಕ್ಷಿತವಾಗಿ

ನನ್ನ ಮಗಳನ್ನು ಹಡೆದಳು. ಆದರೆ ಆ ಮನೆಯನ್ನು ಕೊಂಡ ಕೆಲವು ತಿಂಗಳುಗಳಲ್ಲಿ ಸಾಧನಕೇರಿಯ ಬಂಗ್ಲೆಯಲ್ಲಿ ನನ್ನ ಹಿರಿಯ ಮಗನು ಬಾಲ್ಯದಲ್ಲಿ ತೀರಿಕೊಂಡಾಗ ಕೆಲವರು ಈ ಮನೆಗೂ ಬಾದರಾಯಣ ಸಂಬಂಧವನ್ನು ಅದಕ್ಕೂ ಹಚ್ಚೀ ಹಚ್ಚಿದರು

ನಾನು ಮಾತಾಡುವಾಗ ಗಡಿಬಿಡಿ ಮಾಡುವುದಲ್ಲವೆ, ನಡುನಡುವೆ ತಡೆದು ಮಾತಾಡುತ್ತೇನೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಅದು ಉಗ್ಗುವುದಲ್ಲ ಒಮ್ಮೊಮ್ಮೆ ತಡೆಯಿಲ್ಲದೆಯೂ ಬಹಳ ಹೊತ್ತಿನವರೆಗೆ ಮಾತಾಡುತ್ತೇನೆ ಹೀಗೆ ತಡೆದು ಮಾತಾಡುವುದು ನನ್ನ ನಾಲಿಗೆಯಲ್ಲಿಯ ದೋಷವೆಂದು ಜನರ ತಿಳುವಳಿಕೆ. ಆದರೆ ಅದರ ಗೂಢವು ಬೇರೆ ಅದೆ ಅದು ನನ್ನ ನಾಲಿಗೆಯ ದೋಷಕ್ಕಿಂತಲೂ ಹೆಚ್ಚಿಗೆ ಮೂಗಿನ ದೋಷವೆಂಬುದು ಅನೇಕರು ಅರಿಯದ ಮಾತು. ಇದನ್ನು ಕೇಳಿ ಅನೇಕರಿಗೆ ಆಶ್ಚರ್ಯವಾಗಬಹುದು! ಅದರ ಕಥೆ ಹೀಗಿದೆ. ನಾನು ೫-೬ ವರುಷದವನಿದ್ದಾಗ ಮೂಗಿನಲ್ಲಿ ಒಂದು ಹುಣಿಸೆಯ ಪಕ್ಕವನ್ನು ಹಾಕಿಕೊಂಡಿದ್ದೆನು. ಅದನ್ನು ಅಕ್ಕಸಾಲಿಗನು ಮತ್ತೊಂದು ಸೊಳ್ಳೆಯಲ್ಲಿ ತಿದಿಯಿಂದ ಊದಿ ತೆಗೆದನು. ಆಗ, ಸೊಳ್ಳೆಗಳ ನಡುವಿನ ಕಂಬವು ಆ ಹುಣಿಸೆಪಕ್ಕದಮೂಲಕ ಮಣಿದು ಹೋದದ್ದು ಇಂದಿಗೂ ಹಾಗೆಯೇ ಮಣಿದುಹೋಗಿದೆ ಅದರಿಂದ ಉಸುರಾಡಿಸುವುದಕ್ಕೆ ವ್ಯತ್ಯಯವಾಗಿ ಹೀಗೆ ತಡೆಯಾಗುತ್ತದೆ. ಯಾವ ಕಾರಣದಿಂದ ಹೀಗೆ ಉಸುರು ಸ್ವಲ್ಪ ಕಟ್ಟುತ್ತದೆಂಬುದನ್ನು ಹೇಳುವುದು ಕಠಿನ. ಮನೋವಿಕಾರಗಳ ಉದ್ರೇಕವಾದಾಗ, ವಿಶೇಷ ಆನಂದವುಂಟಾದಾಗ,

ತುಸು ಅಜೀರ್ಣವಾದಾಗ ಅಥವಾ ಉಪವಾಸವಿದ್ದಾಗ ಕೂಡ ಹೀಗೆ ತಡೆಯುಂಟಾಗುತ್ತದೆ. ಈ ದೋಷವು ಮುಂಚೆ ಯಾರ ಲಕ್ಷದಲ್ಲಿಯೂ ಬಂದಿರಲಿಲ್ಲ. ಹಾನಗಲ್ಲಿನಲ್ಲಿ ಕನ್ನಡ ಶಾಲೆಯ ಇಯತ್ತೆಯ ಪರೀಕ್ಷೆಗೆ ಶ್ರೀ ಪಠಾಣ ಸಾಹೇಬರೆಂಬವರು ಬಂದಿದ್ದರು. ನಾನು ಅರ್ಜುನ ವೃಷಸೇನರ ಕಾಳಗದೊಳಗಿಂದಲೋ ಏನೋ ಒಂದು ಉದ್ದವಾದ ಸಂಭಾಷಣೆಯನ್ನು ಅಂದು ತೋರಿಸಿದೆನು ಆಗ ಅವರ ಲಕ್ಷ್ಯಕ್ಕೆ ಇದು ಬಂದು ಅವರು ಅದನ್ನು ನಮ್ಮ ತಂದೆಯವರಿಗೆ ಹೇಳಿದರು. ಆದರೂ ಅದರ ಕಾರಣದ ಬಗ್ಗೆ ಚಿಕಿತ್ಸೆಯಾಗಲಿಲ್ಲ ಇಂಗ್ಲಿಷ ಕಲಿಯಲು ಧಾರವಾಡಕ್ಕೆ ಬಂದೆ. ನಾನು ಇದ್ದ ನಮ್ಮ ಸೋದರತ್ತೆಯ ಮನೆಯವರಿಗೆ ಮಲಗಿದಾಗ ದೀರ್ಘಶ್ವಾಸ ಬಿಡುತ್ತೇನೆಂಬುದು ಗೊತ್ತಾಗಿ, ನನ್ನ ಪ್ರಕೃತಿಯನ್ನು ವೈದ್ಯರಿಗೆ ತೋರಿಸಿದರು. ಶ್ರೀ ದತ್ತೂದೀಕ್ಷಿತರೆಂಬವರು ಕಸ್ತೂರಿಯಲ್ಲಿ ಒಂದು ಔಷಧಮಾಡಿಕೊಟ್ಟು, ಮೂಗಿನಲ್ಲಿ ಹಾಕಿಕೊಂಡು ಮಲಗಲಿಕ್ಕೆ ಹೇಳಿದರು ಆಗ ಅದು ಕಡಿಮೆಯಾಗುತ್ತಿತ್ತು. ಆದರೆ, ಹಗಲು ಅದು ಕಡಿಮೆಯಾಗಲಿಲ್ಲ ಡಾ. ವಿನಾಯಕರಾವ ಕಿರ್ಲೋಸ್ಕರ ಇವರಿಗೆ ತೋರಿಸಿದರು. ಅವರು ನಡುವಿನ ಕಂಬದ ಮಗ್ಗಲಿಗೆ ಮಾಂಸ ಬೆಳೆದಿರುತ್ತದೆಂದೂ ಅದನ್ನು ಶಸ್ತ್ರದಿಂದ ತೆಗೆಯಬೇಕಾದೀತೆಂದೂ ಹೇಳಿದರು. ಶಸ್ತ್ರಚಿಕಿತ್ಸೆಯಿಂದ ಕೂಡಲೇ ಆಗ ಬಲು ಗಾಬರಿ ನಮ್ಮ ತಂದೆಯವರು ಹಾನಗಲ್ಲಿನಿಂದ ಕರೆಯಿಸಲ್ಪಟ್ಟರು. ಅವರು ನನ್ನನ್ನು ಸಿವಿಲ್‌ಸರ್ಜನರಿಗೆ ತೋರಿಸಿದರು. ಅವರು ಚೆನ್ನಾಗಿ

ತಪಾಸುಮಾಡಿ, ಅದು ಮಾಂಸಖಂಡ ಬೆಳೆದ ದೋಷವಲ್ಲ ವೆಂದೂ ನಡುಗಂಬವು ಒಮ್ಮೆಗ್ಗಲಿಗೆ ಮಣಿದಿರುತ್ತದೆಂದೂ ಹೇಳಿ, ಶಸ್ತ್ರಚಿಕಿತ್ಸೆಮಾಡಿದ್ದರ ಒಳಿತಾಗುತ್ತಿದ್ದಿಲ್ಲವೆಂದು ಹೇಳಿದರು. ಆಗ ನಮ್ಮ ತಂದೆಯವರಿಗೆ ನಾನು ಹುಣಚೀ ಪಕ್ಕ ಹಾಕಿಕೊಂಡದ್ದು ಧ್ಯಾನಕ್ಕೆ ಬಂದಿತು! ಒಂದು ಚಿಕ್ಕ ಸಂಗತಿ ಮನುಷ್ಯನ ಆಯುಷ್ಯದ ದಿಸೆಯನ್ನು ಹೇಗೆ ಬದಲುಮಾಡುತ್ತದೆಂಬುವನ್ನು ನೋಡಿ ಆಶ್ಚರ್ಯವಾಗು ತ್ತದೆ. ಮುಂದೆ ಅದಕ್ಕ ಉಪಾಯಮಾಡುವುದನ್ನೇ ಬಿಟ್ಟಿದೆ ಈಗಲೂ ನಾನು ಮಲಗುವಾಗ ವಿಶಿಷ್ಟ ತೆರ ದಲ್ಲಿಯೇ ಮಲಗಬೇಕಾಗುತ್ತದೆ ನಾನು ವಕೀಲನಾಗಿ ದ್ದಾಗ ಶ್ರೀ. ಹೇರ್ಲೇಕರ ಇವರು ಡಿಮಾಸ್ಥಿನಿಸನ ಉದಾ ಹರಣೆಯನ್ನು ಕೊಟ್ಟು, ಪರಿಶ್ರಮದಿಂದ ಮಾತಾಡುವ ಪದ್ಧತಿಯನ್ನು ಸುಧಾರಿಸಬೇಕೆಂದು ಹೇಳಿದರು ಅದಕ್ಕೆ ನಾನು, ಒಂದು ರೀತಿಯಿಂದ ಡಿಮಾಸ್ಥಿನೀಸನು ನನಗೆ ಮಹಾಮೂರ್ಖನಾಗಿ ತೋರುತ್ತಾನೆಂದು ಹೇಳಿದೆನು. ಏಕೆಂದರೆ, ದೇವರು ಪ್ರತಿಯೊಬ್ಬನಿಗೆ ಕೆಲವು ಅನುಕೂಲ ಗುಣಗಳನ್ನೂ ಕೆಲವು ಪ್ರತಿಕೂಲ ದೋಷಗಳನ್ನೂ ಕೊಟ್ಟಿರು ತ್ತಾನೆ. ಅನುಕೂಲ ಗುಣಗಳನ್ನು ಪರಿಪೋಷಿಸಿ, ಪ್ರತಿಕೂಲ ದೋಷಗಳನ್ನು ಕಡಿಮೆಮಾಡಿಕೊಳ್ಳಲು ಯತ್ನಿಸುವುದು ನಮ್ಮ ಕರ್ತವ್ಯವೇನೋ ಅಹುದು. ಆದರೆ, ತೀವ್ರ ತಿದ್ದ ಲಾಗದ ದೋಷವನ್ನು ತಿದ್ದಿಕೊಳ್ಳುವುದರಲ್ಲಿಯೇ ವ್ಯರ್ಥ ವಾಗಿ ಶಕ್ತಿಸರ್ವಸ್ವವನ್ನು ವೆಚ್ಚಮಾಡುವುದಕ್ಕಿಂತ, ದೇವರು ಕೊಟ್ಟ ಕೆಲವು ಗುಣಗಳ ಸಂವರ್ಧನ ಮಾಡುವುದು ಹೆಚ್ಚು ಲೇಸಲ್ಲವೆ? ಡೆಮಾಸ್ಥಿನಿಸನು ಆ ತನ್ನ ನಾಲಿಗೆಯಲ್ಲಿಯ

ದೋಷವನ್ನು ಕಳೆದುಕೊಳ್ಳುವುದರಲ್ಲಿ ಹಾಕಿದ ಶಕ್ತಿ ಯನ್ನು, ತನ್ನಲ್ಲಿದ್ದ ಗುಣಗಳನ್ನು ಸಂವರ್ಧನಮಾಡಿ ಕೊಳ್ಳುವುದರಲ್ಲಿ ವೆಚ್ಚಮಾಡಿದ್ದರೆ ಆತನು ಹತ್ತುಪಟ್ಟು ದೊಡ್ಡವನಾಗುತ್ತಿದ್ದನೆಂದು ಉತ್ತರಕೊಟ್ಟೆನು

ಹಾನಗಲ್ಲಿನಲ್ಲಿದ್ದಾಗ, ಹೋಳಿಹುಣ್ಣಿವೆ ಅಲಾಹಬ್ಬಗಳಲ್ಲಿ ಅಲ್ಲಿ 'ಏನು ಕೊಂದಿ ಕೂಸಿನ' ಎಂಬಿವೇ ಮುಂತಾದ ಪದಗಳನ್ನು ಹಾಡುವ ಪದ್ಧತಿ ನಮ್ಮ ತಂದೆಗಿಂತ ಹಿಂದೆ ಇದ್ದ ಒಬ್ಬ ಶಿರಸ್ತೆದಾರನ ಮಗಳನ್ನು ಹತ್ತರದ ಮನೆಯಲ್ಲಿದ್ದ ಒಬ್ಬ ವೈದಿಕ ಬ್ರಾಹ್ಮಣನ ಹೆಂಡತಿಯು ಒಡವೆಗಳ ಆಶೆಗಾಗಿ ದೀಪಾವಳಿ ಪಾಡ್ಯದ ದಿವಸ ಕೊಂದಿದ್ದಳು. ಆ ಸಂಗತಿಯ ಬಗ್ಗೆ ಈ ಲಾವಣಿ ಪದಗಳನ್ನು ಕಟ್ಟಿ ಹಾಡಿತೋರಿಸಿ, ಜನರ ಕಣ್ಣೊಳಗಿಂದ ನೀರು ಉದುರಿಸುತ್ತಿದ್ದರು! ಒಬ್ಬ ಕೊಂಕಣಸ್ಥ ಮಾಮಲೇದಾರನು ಅಲ್ಲಿಗೆ ನಾವಿದ್ದಾಗ ಬಂದಿದ್ದನು. ಆತನು ಘಟಿಂಗನು. ಹೋಳಿಹುಣ್ಣಿವೆಗಳಲ್ಲಿ ಕೆಟ್ಟ ಕೆಟ್ಟ ಪದಗಳನ್ನು ಪಾತ್ರದವರ ಕಡೆಯಿಂದಲೇ ಹಾಡಿಸಿ ಕೇಳಲಿಕ್ಕೆ ಆತನಿಗೆ ಹೌಸು ಬಹಳ. ತಾರಕೇಶ್ವರ ದೇವರ ನವರಂಗದಲ್ಲಿ ಇದರ ಮಜಲು. ನಮ್ಮ ತಂದೆಯವರು ಅತ್ಯಂತ ಗಂಭೀರಸ್ವಭಾವದವರು. ಅವರು ತಾವಂತೂ ಹೋಗಲೇ ಇಲ್ಲ. ನಮಗೂ ಹೋಗಗೊಡಲಿಲ್ಲ ಆದರೂ, ಕುತೂಹಲದಿಂದ ನಾವು ಕದ್ದು ಹೋದೆವೇ. ಆದರೆ ಅಲ್ಲಿಯ ಬೀಭತ್ಸತನಕ್ಕೆ ನಾವೂ ನಾಚಿ ಓಡಿಬಂದೆವು, ಪಾತ್ರದವರೂ ನಾಚಿದರು!

ಅಧಿಕಾರಸ್ಥರ ಮಕ್ಕಳಲ್ಲಿ ಅಹಂಕಾರವು ಬಲುಬೇಗನೆ ಹುಟ್ಟುತ್ತದೆ. ನಿಜವಾಗಿ ನೋಡಿದರೆ, ಶಿರಸ್ತೇದಾರನೆಂದರೆ

ಬಹಳ ಚಿಕ್ಕ ಅಧಿಕಾರಿ. ಆದರೆ ತಾಲೂಕಿನಲ್ಲಿ ಆತನೂ ಒಬ್ಬ
ದೊಡ್ಡ ಅಧಿಕಾರಿಯಷ್ಟೆ. ನಾನು ಶಿರಸ್ತೆದಾರನ ಮಗನಾ
ದುದರಿಂದ, ಧಾರವಾಡದಲ್ಲಿ ಕಲಿಯಲಿಕ್ಕೆಂದು ಮೊಖಾಶಿ
ಯವರ ಮನೆಯಲ್ಲಿದ್ದಾಗ, ಎಡವಿಬಿದ್ದರೆ ಹೋಗುವಷ್ಟು
ಹತ್ತರದಲ್ಲಿಯೇ ಪಲ್ಯದ ಪೇಟೆಯಿದ್ದರೂ ನಾನು ಪಲ್ಯ
ತರಲಿಕ್ಕೆ ನಾಚುತ್ತಿದ್ದೆನು ಎಂದಾದರೂ ತರಲೇಬೇಕಾ
ದರೆ, ಪಲ್ಯವನ್ನು ಮುಚ್ಚಿಕೊಂಡು, ಒಂದೇ ಹಾರಿಕೆಗೆ
ಮನೆಗೆ ಓಡುತ್ತಿದ್ದೆನು. ನನ್ನ ಸುದೈವದಿಂದ ಮುಂದೆ
ನನ್ನ ಆಯುಷ್ಯಕ್ಕೆ ಬೇರೆ ದಿನೆ ದೊರೆಯಿತೆಂಬ ಮಾತು ಬೇರೆ

ವರದಕ್ಷಿಣೆಯ ವಿಷಯಕ್ಕೆ ನಮ್ಮ ತಂದೆಯವರ ವಿಚಾರ
ಗಳು ಸ್ವತಂತ್ರವಾಗಿದ್ದವು. ವರದಕ್ಷಿಣೆಯನ್ನು ತೆಗೆದು
ಕೊಳ್ಳಬಾರದೆಂದು ಅವರ ಮತವಿದ್ದಿಲ್ಲ ಆದರೆ ಅವರ
ಲ್ಲಿಯ ಒತ್ತಾಯದ ಭಾಗವು ಮಾತ್ರ ಹೋಗಲೇ
ಬೇಕೆಂದು ಅವರ ಅಭಿಪ್ರಾಯ ಗಂಡುಮಕ್ಕಳಿಗೆ ಪಾಲು
ಸಿಕ್ಕುತ್ತದೆ. ಹಾಗೆಯೇ ಹೆಣ್ಣುಮಕ್ಕಳಿಗೆ ಆಸ್ತಿಯ ಕೆಲವು
ಭಾಗವು ಮುಟ್ಟಬೇಕಷ್ಟೆ. ಅದನ್ನು ಪರ್ಯಾಯದಿಂದ
ಮುಟ್ಟಿಸುವ ಅದೊಂದು ಪದ್ಧತಿಯೆಂದೂ ವರಪಕ್ಷದವರು
ಅದೊಂದು ವ್ಯಾಪಾರವೆಂದು ತಿಳಿಯುವುದರಿಂದ ಸಮಾಜವು
ಹಾಳಾಗಿದೆಯೆಂದೂ ಅವರು ಅನ್ನುತ್ತಿದ್ದರು. ಹೋದವರುಷ
ಒಬ್ಬ ಪೆನಶನರನು ಒಂದು ಕಡೆಗೆ ಕನ್ಯೆಯನ್ನು ತೆಗೆದುಕೊ
ಳ್ಳುವುದನ್ನು ಗೊತ್ತುಮಾಡಿ, ಅರೆದರೆದು ವರದಕ್ಷಿಣೆ ಏರಿಸಿ
ದನು. ಕೊನೆಗೆ ಮತ್ತೊಬ್ಬ ಕನ್ಯೆಯನ್ನು ನೋಡುವ ನೆವ
ದಿಂದ ತನ್ನ ಮಗನನ್ನು ಅವರ ಮನೆಗೆ ನೋಡಲಿಕ್ಕೆ ಕಳಿಸಿ
ದಂತೆ ಮಾಡಿ, ಇತ್ತ ಆ ಅಂಜಿಕೆ ಹಾಕಿ ಪುನಃ ವರದಕ್ಷಿಣೆ

ಏರಿಸಿಕೊಂಡನು! ಇದು ಕೇವಲ ಅಪವಾದಾತ್ಮಕ ಉದಾ
ಹರಣೆಯಲ್ಲ; ಈಗಿನ ಸಾಮಾನ್ಯ ಪದ್ಧತಿ ತೆಗೆದುಕೊಳು
ವವರು ಒತ್ತಾಯದಿಂದ ತೆಗೆದುಕೊಳ್ಳಬಾರದು, ಕೊಡು
ವವರು ಅದರ ಲಾಭವನ್ನು ತೆಗೆದುಕೊಂಡು ಕೊಡದೆ ಇರ
ಬಾರದೆಂದು ಅವರ ಮತ. ಅವರು ತಮ್ಮ ನಾಲ್ಕೂ ಗಂಡು
ಮಕ್ಕಳ ಲಗ್ನವನ್ನು ಆ ರೀತಿಯಲ್ಲಿಯೇ ಮಾಡಿತೋರಿಸಿ
ದರು. ಹೆಣ್ಣುಮಕ್ಕಳ ಲಗ್ನವನ್ನು ಹಾಗೆ ಮಾಡುವುದು
ಮಾತ್ರ ಅವರ ಕೈಯಲ್ಲಿದ್ದಿಲ್ಲ ಅವರು ಮೇಲಿಂದ ಮೇಲೆ
ಹಸ್ತೋದಕದ ಉದಾಹರಣೆ ಕೊಡುತ್ತಿದ್ದರು ಜುಲುಮೆ
ಯಿಂದ ಘಂಡು ಕೂಡಿಸುವುದಕ್ಕಿಂತ, ಹೀಗೆ ಹಸ್ತೋದಕ
ದಿಂದ ಬಂದ ಹಣವು ಹೆಚ್ಚಿಗೆ ಪವಿತ್ರವೆಂದು ಅವರ ಭಾವನೆ.
ವರದಕ್ಷಿಣೆಯ ಪದ್ಧತಿಯನ್ನು ಪೂರ್ಣವಾಗಿ ನಿಲ್ಲಿಸುವುದು
ಶಕ್ಯವಲ್ಲವೆಂದೂ ಅದಕ್ಕೆ ಈ ರೀತಿಯಾಗಿ ಪ್ರೇಮದ ಕಾಣಿ
ಕೆಯ ಸ್ವರೂಪವನ್ನು ಕೊಡುವುದು ಶಕ್ಯವಿದೆಯೆಂದೂ ಅವರ
ಮತ. ಬಹಳ ಕಾಡಿದರೆ, ಕೊಡುವವರು ತಮ್ಮ ಯೋಗ್ಯತೆ
ಗಿಂತ ೧೦೦-೨೦೦ ರೂ ಹೆಚ್ಚು ಕೊಡಬಹುದು. ಅಷ್ಟರ ಸಲು
ವಾಗಿ ಇಷ್ಟೇಕೆ ಕೆಡಕುತನವನ್ನು ತೆಗೆದುಕೊಳ್ಳಬೇಕು? ಮಿಕ್ಕ
ವಿಷಯಗಳಲ್ಲಿ ಅಂದರೆ ಕುಲ, ಶೀಲ, ಸರಿಸಮಾನ ಸ್ಕಂಥತ
(ಪ್ರೇಮವಿವಾಹಗಳೂ ಕಾಮವಿವಾಹಗಳೂ ಆಗ ಇರಲಿಲ್ಲ)
ಇವೇ ಮುಂತಾದವುಗಳಲ್ಲಿ ಹೊಂದಿಕೆಯಾದ ಬಳಿಕ,
ಈ ರೀತಿಯಲ್ಲಿ ವರದಕ್ಷಿಣೆಯ ಪ್ರಶ್ನೆಯನ್ನು ಬಿಡಿಸುವುದೇ
ಲೇಸಲ್ಲವೇ? ಹಿಂದಕ್ಕೆ ಶ್ರೀ. ಶಣೈ ಎಂಬ ವಿದ್ಯಾರ್ಥಿಯು
ವರದಕ್ಷಿಣೆಯ ವಿರುದ್ಧವಾಗಿ ಒಂದು ಚಿಕ್ಕ ಪುಸ್ತಕವನ್ನು
ಬರೆದು, ನನಗೆ ಪ್ರಸ್ತಾವನೆ ಬರೆಯಲಿಕ್ಕೆ ಹೇಳಿದಾಗ ನಾನು

ಒಪ್ಪದಿದ್ದುದಕ್ಕೆ ಮೇಲ್ಕಾಣಿಸಿದಂಥ ನನ್ನ ವಿಚಾರಗಳೇ ಕಾರಣಗಳು. ಶ್ರೀ. ರಾಮರಾವ ನರಗುಂದಕರ ಇವರು ಆಗ ಆ ಬಗ್ಗೆ ನನ್ನನ್ನು ಬಹಳ ದೂಷಿಸಿದರು ಇನ್ನೂ ವರೆಗೆ ವರ ದಕ್ಷಿಣೆ ಮಾನವು ಏರುತ್ತಲೇ ಇದೆಂಬುದನ್ನೂ ದೊಡ್ಡ ಹೆಣ್ಣು ಮಕ್ಕಳನ್ನು ಕಟ್ಟಿಕೊಂಡು ಬರಲಿಕ್ಕೆ ತಂದೆಗಳಿಗೆ ವರಪಕ್ಷದವರು ಒತ್ತಾಯಪಡಿಸುವ ಹೊಸ ದುಷ್ಟ ಪದ್ಧತಿಯು ಬಿದ್ದಿರುವುದೆಂಬುವನ್ನೂ ನೋಡಿದರೆ ನಮ್ಮ ಸಮಾಜದ ಹೀನ್ಸ್ಥಿತಿಯ ಬಗ್ಗೆ ಕನಿಕರ ಉಂಟಾಗುತ್ತದೆ. ಮತ್ತು ನಮ್ಮ ತಂದೆಯವರ ವಿಚಾರದಲ್ಲಿ ತಥ್ಯಾಂಶವಿದೆಂದೆನಿಸುತ್ತದೆ.

ಮದುವೆಗಳಲ್ಲಿ ಜಗಳವೆಂದರೆ ನಮ್ಮ ತಂದೆಯವರಿಗೆ ಬಲು ತಲೆಶೂಲಿ. ಅವರು ೬-೭ ಮದುವೆಗಳನ್ನು ಮಾಡಿದರೂ ಒಂದರಲ್ಲಿಯೂ ತಂಟೆಯಾಗಲಿಲ್ಲ ಅವರು ಈ ವಿಷಯದಲ್ಲಿ ಎಷ್ಟು ಸೂಕ್ಷ್ಮಸ್ವಭಾವದವರಿದ್ದರೆಂಬ ಬಗ್ಗೆ ಒಂದು ಉದಾಹರಣೆ ಕೊಡುತ್ತೇನೆ. ೧೮೯೬ರಲ್ಲಿ ನನ್ನ ಮೊದಲನೆಯ ಲಗ್ನವಾದಾಗ, ನಮ್ಮ ತಾಯಿಯವರು ತಮ್ಮ ಸ್ವಭಾವದಂತೆ ನವಲಗುಂದದಿಂದ ಓಣಿಯೊಳಗಿನ ಅನೇಕ ಕುಟುಂಬದವರನ್ನು ಕರೆದುಕೊಂಡು ಬಾಗಲಕೋಟೆಗೆ ಲಗ್ನಕ್ಕೆ ಹೊರಟರು. ಅನೇಕ ತರಹದ ಸ್ವಭಾವದ ಜನರು ಕೂಡಿದ ಕಾರಣ, ಎಲ್ಲಿ ಜಗಳವಾಗುವುದೋ ಎಂದು ನಮ್ಮ ತಂದೆಯವರಿಗೆ ಅಂಜಿಕೆ. ಅವರು ಆ ವಿಷಯದಲ್ಲಿ ನನಗೂ ಎಲ್ಲರಿಗೂ ತಾಕೀದುಕೊಟ್ಟರು. ಕಳುವೂಟದ ದಿವಸ ನಾನೂ ಶ್ರೀ. ಛಬ್ಬಿ ಹನುಮಂತರಾಯರೂ (ಇಬ್ಬರ ಲಗ್ನಗಳೂ ಕೂಡಿಯೇ ಆದವು. ನನಗೆ ಶ್ರೀ. ಶ್ಯಾಮರಾಯರ ಮಗಳನ್ನು ಕೊಟ್ಟಿತ್ತು, ಅವರಿಗೆ ಮೊಮ್ಮಗಳನ್ನು ಕೊಟ್ಟಿತ್ತು.)

ಇಬ್ಬರೂ ಕೂಡಿ ಬಹಿರ್ದಿಸೆಗೆ ಊರಹೊರಗೆ ಹೋಗಿದ್ದೆವು. ಆದೇ ಕಾಲಕ್ಕೆ ಇತ್ತ, ನನ್ನನ್ನು ಊಟಕ್ಕೆ ಕರೆಯಲಿಕ್ಕೆ ಬಂದರು. ನಾನು ಮನೆಯಲ್ಲಿ ಇರಲಿಲ್ಲ ಆಯಿತು, ನಮ ತಂದೆಯವರ ಪಿತ್ತವು ತಲೆಗೇರಿತು. ನಮ್ಮ ತಾಯಿಯ್ಮ ಸ್ವಭಾವವು ಅವರಿಗೆ ಗೊತ್ತಿದ್ದುದರಿಂದ ಅವಳು ನನಗೆ ಹಟಹಿಡಿಯಲಿಕ್ಕೆ ಕಲಿಸಿದ್ದಿಲ್ಲವೆಂಬುದು ಅವರಿಗೆ ಗೊತ್ತಿತ್ತು. ಆದರೆ ಮಾಡುತ್ತಾರೇನು? ಮಂದಿಯ ಮೇಲೆ ಸಿಟ್ಟ ಗೇಳಲಿಕ್ಕೆ ಬರುವಂತಿಲ್ಲ. ಆದಕಾರಣ ಅವರು ನಮ್ಮ ತಾಯಿಯವರ ಮೇಲೆ ರೇಗಿಗೆದ್ದರು ಆ ಪ್ರಾಣಿ ಅಳಲಿಕ್ಕೆ ಹತ್ತಿದಳು ನಾನು ಕಲಿಸಿಲ್ಲವೆಂದು ಹೇಳಿದಳು. ನನ್ನನ್ನು ಮನೆಯಲ್ಲಿ ಹುಡುಕಹತ್ತಿದ್ದರು ಅಷ್ಟರಲ್ಲಿ ನಾನು ಹೊರ ಗಿನಿಂದ ಬಂದೆ. ನಿಜಸಂಗತಿ ತಿಳಿದಾಗ ಎಲ್ಲವೂ ಶಾಂತ ವಾಯಿತು. ಇದೇ ಸಂದರ್ಭದಲ್ಲಿ ನಮ್ಮ ತಾಯಿಯ ಸಾದಾ ತನದ ಒಂದು ಉದಾಹರಣೆಯನ್ನು ಹೇಳಿಬಿಡುತ್ತೇನೆ. ನಾನು ಅಳಿಯತನಕ್ಕೆ ಹೋದಾಗ, ಅವಳು ತಾನು ಬೀಗಿತ್ತಿ ಯೆಂಬುದನ್ನು ತಿಲಪ್ರಾಯವೂ ಮನಸ್ಸಿನಲ್ಲಿ ತಾರದೆ, ಅವರ ಮನೆಯಲ್ಲಿ ಉಡುಸಾರಣೆ ಉಪಕರಣಗಳನ್ನು ಮಾಡ ಹತ್ತಿದ್ದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಈ ತರಹದ ಅವಳ ಆಚರಣೆಯ ಮೂಲಕವೆ, ಪಲ್ಯತರಲಿಕ್ಕೆ ಕೂಡ ನಾಚುತ್ತಿದ್ದ ನನ್ನ ಅಹಂಕಾರವು ಆಗಿನಿಂದ ಇಳಿಯ ಲಿಕ್ಕೆ ಪ್ರಾರಂಭವಾಯಿತು.

ಹಾಯುಸ್ಕೂಲಿನಲ್ಲಿದ್ದಾಗ, ನಾಟಕಗಳನ್ನಾಡುವುದೊಂದು ಹುಚ್ಚು ಆಗ ಅದೇ ಪ್ರಚಾರದಲ್ಲಿ ಬಂದಿತ್ತು. ಆ ಪ್ರಕಾರ ನಾವು ೧೮೯೬ನೆಯ ಇಸ್ವಿಯ ಪ್ರಾರಂಭದಲ್ಲಿ ಒಂದು ನಾಟಕ

ಆಡಬೇಕೆಂದು ನಿಶ್ಚಯಿಸಿದೆವು. ಆದರೆ, ಮಿಕ್ಕವರು ಮಾ
ದಿದ್ದುದನ್ನು ಮಾಡುವುದು ದೊಡ್ಡವರ ಲಕ್ಷಣವಷ್ಟೆ! ಆ
ಕಾರಣ, ಸಂಸ್ಕೃತ ನಾಟಕವನ್ನಾಡಬೇಕೆಂದು ನಿರ್ಧರಿ
ದೆವು. ನನಗೆ ನಾಟಕದಲ್ಲಿ ವಿದ್ಯಾರ್ಥಿಗಳು ಸ್ತ್ರೀಪಾತ್ರ
ವನ್ನು ಹಾಕುವುದು ಸೇರುತ್ತಿರಲಿಲ್ಲ. ಅಲ್ಲದೆ ಸ್ತ್ರೀ ಪಾತ್ರಗಳ
ಸಿಗುತ್ತಲೂ ಇರಲಿಲ್ಲ ಆದಕಾರಣ ಹುಡುಕಿ ಹುಡುಕಿ
ಕೊನೆಗೆ ವೇಣೀಸಂಹಾರ ನಾಟಕದಲ್ಲಿಯ, ಸ್ತ್ರೀ ಪಾತ್ರವಿಲ್ಲದ
೩ ಮತ್ತು ೪ನೆಯ ಅಂಕುಗಳನ್ನು ಆರಿಸಿದೆವು. ೩ನೆಯ ಅಂಕಿನ
ಪ್ರಾರಂಭಕ್ಕಿರುವ ರಾಕ್ಷಸಿ ಪಾತ್ರವನ್ನು ರಾಕ್ಷಸ ಪಾತ್ರ
ವನ್ನಾಗಿ ಮಾರ್ಪಡಿಸಿದೆವು ಮಂಗಳವಾರಪೇಟೆ
ಯಲ್ಲಿ ಶ್ರೀ ಕೃಷ್ಣರಾವ ಜೋಸಿ ಇವರ ಅಟ್ಟವಮೇಲೆ
ಆಡಿದೆವು ಧಾರವಾಡದಲ್ಲಿ ಸಂಸ್ಕೃತದಲ್ಲಿ ನಾಟಕವನ್ನಾ
ಡಿದ್ದು ಇದೇ ಮೊದಲನೆಯದು ಮುಂದೆ ವೆಂಕಣ್ಣಾ ಹೆಬ
ಸೂರ ಎಂಬವನು ಸ್ತ್ರೀ ಪಾತ್ರವನ್ನು ಮಾಡಲಿಕ್ಕೆ ಅತ್ಯಂತ
ಉತ್ಸಾಹಗೊಂಡನು. ಆದಕಾರಣ, ಶ್ರೀ ಕೃಷ್ಣರಾವ
ಮುದವೇಡೆಕರ ಇವರೇ ಮುಂತಾದವರು ಮುದಿಹಾಳದಲ್ಲಿ
ಹೂಡಿದ ಗಣಪತಿ ಉತ್ಸವದ ಹಂದರದಲ್ಲಿ ನಾವು ಅದನ್ನು
ಆಡಿದೆವು. ಆದರೆ ಬಣ್ಣದ ಕೋಣೆಯಲ್ಲಿ, ಚಿಕ್ಕವರಿಗೆ
ಹಿರಿಯರು ಸ್ತ್ರೀಪಾತ್ರದ ಅಭಿನಯದ ಬಗ್ಗೆ ಹೇಳಿಕೊಡುವ
ಕಲಿಕೆಗಳನ್ನು ನೋಡಿ, ನನ್ನ ಮನದಲ್ಲಿ ಒಂದು ಬಗೆಯ್ದ
ಜಿಗುಪ್ಸೆ ಉಂಟಾಯಿತು. ಅದು ಇವತ್ತಿಗೂ ಉಳಿದಿದೆ.

ನಮ್ಮ ತಂದೆಯವರು ಸರಕಾರೀ ನವಕರಿಯಲ್ಲಿದ
ಕಾರಣ, ಅವರು ಸಾರ್ವಜನಿಕ ಚಳವಳಿಯಲ್ಲಿ ಬೀಳುವ
ಪ್ರಸಂಗ ಬರಲಿಲ್ಲ. ಆದರೆ ವ್ಯಕ್ತಿಶಃ ಅವರು ಮನೆಯಲ್ಲಿ

ರಾಷ್ಟ್ರೀಯ ಭಾವನೆಯನ್ನು ತಾಳಿದ್ದರು. ಕೇಸರಿಪತ್ರಕ್ಕೆ ಅವರು ಬಹುಶಃ ಮೊದಲಿನಿಂದಲೂ ಚಂದಾದಾರರಾಗಿದ್ದರು. ನಾನು ವಕೀಲನಾದಾಗ, ಕೇಸರಿಗೆ ನಾನು ಚಂದಾದಾರ ನಾಗಿದ್ದರೂ, ಅವರು ತಮಗಾಗಿ ಆಲೂರಿನಲ್ಲಿ ಕೇಸರಿಯನ್ನು ಪ್ರತ್ಯೇಕವಾಗಿ ತರಿಸುತ್ತಿದ್ದರು. ಅವರು ದಾಭೋಳಕರ ಮಾಲೆಯ ಮರಾಠೀ ಪುಸ್ತಕಗಳೆಲ್ಲವನ್ನೂ ಓದಿದ್ದರು ಚಿಪ ಳೂಣಕರ ಭಾರತಾದಿಗಳನ್ನೂ ಸಂಗ್ರಹಿಸಿದ್ದರು. ನಾನು ಶಾಂತೇಶ ವಾಚನಾಲಯದ ಉಪಯೋಗಕ್ಕಾಗಿ ಕೊಟ್ಟ ಗ್ರಂಥಸಂಗ್ರಹಾಲಯದಲ್ಲಿ ಇನ್ನೂ ಅವುಗಳಲ್ಲಿ ಕೆಲವು ಇವೆ. ಅವರ ಪ್ರವೃತ್ತಿಯು ಮೊದಲಿನಿಂದಲೇ ಲೋಕೋಪ ಯೋಗದ ಕಾರ್ಯಗಳ ಕಡೆಗೆ ಇತ್ತು. ಸಾರ್ವಜನಿಕ ಜೀವ ನವು ಸರ್ವರಿಗೂ ಸಮನಾಗಿಯೇ ಲಭಿಸುತ್ತದೆಂತಲ್ಲ. ಅದು ಅವರವರ ಕಾಲದ ಮತ್ತು ಪರಿಸ್ಥಿತಿಯ ಮೇಲೂ ಅವಲಂಬಿ ಸಿರುತ್ತದೆ. ತಮ್ಮ ಪರಿಸ್ಥಿತಿಯಲ್ಲಿ ಅವರು ಕೈಲಾದಮಟ್ಟಿಗೆ ಇಂಥ ಕಾರ್ಯಗಳನ್ನು ಮಾಡುತ್ತ ಬಂದಿರುವರು ನಾನು ಹುಟ್ಟಿದಾಗ ಅವರು ವಿಜಾಪುರದಲ್ಲಿದ್ದರಷ್ಟೆ. ಅಲ್ಲಿಯ ಅನಂತ ಶಯನ ಗುಡಿಯ ಜೀರ್ಣೋದ್ಧಾರ ಮಾಡಿದವರಲ್ಲಿ ಅವರು ಪ್ರಮುಖರು. ಮುಂದೆ, ಸ್ವಲ್ಪೇ ದಿನಗಳಲ್ಲಿ ಅವರು ಹೊಳೆ ಆಲೂರಿನಲ್ಲಿ ಸ್ವಂತ ಸುಮಾರು ಎರಡು ಸಾವಿರ ರೂಪಾಯಿ ವೆಚ್ಚಮಾಡಿ ಶ್ರೀಲಕ್ಷ್ಮೀನಾರಾಯಣ ದೇವರ ಗುಡಿಯನ್ನು ಕಟ್ಟಿಸಿದ್ದಾರೆ. ಆ ಗುಡಿಯ ಪೂಜೆಗೆ ಹೊಲಗಳನ್ನು ಕಾದಿ ಟ್ಟಿದ್ದಾರೆ. ಮಳಿಗಿ ಪಾಂಡುರಂಗಾಚಾರ್ಯರ ಮನೆತನದ ವರು ಇವತ್ತಿಗೂ ಆ ದೇವರ ಪೂಜೆಯನ್ನು ಮಾಡುತ್ತ ಬಂದಿರುವರು. ಈ ಗುಡಿಯನ್ನು ಮುಂಚೆ ಕಟ್ಟಿಸಿ

ಆ ಬಳಿಕವೇ ಅವರ ತಮ್ಮ ಹಳೆಯ ಮನೆಯನ್ನು ಹೊಸ ದಾಗಿ ಕಟ್ಟಿಸಿದರು. ನಾನು ಕಾಲೇಜಿನಲ್ಲಿದ್ದಾಗ ಒಮ್ಮೆ ಮೇ ತಿಂಗಳ ರಜೆಯಲ್ಲಿ ಆಲೂರಿಗೆ ಬಂದಿದ್ದೆನು. ಆಗ, ಆ ಗುಡಿಯಲ್ಲಿಯ ಒಂದು ಕಲ್ಲಿನಲ್ಲಿ ನಮ್ಮ ತಂದೆಯವರು ತಮ್ಮ ಹೆಸರನ್ನು ಕೆತ್ತಿಸಬೇಕೆಂದು ಸೂಚಿಸಿದೆನು. ಆದರೆ ಅವರು ಅದಕ್ಕೆ ಒಪ್ಪದೆ, ನನ್ನ ಅಹಂಕಾರಕ್ಕೆ ತಡೆಹಾಕಿ ದರು. ಹೊಳೆಆಲೂರಿನಲ್ಲಿರುವ ಹನುಮಂತದೇವರ ಗುಡಿಗೆ ತಾವು ಸ್ವಂತ ಒಂದು ನೂರು ರೂಪಾಯಿ ಪಟ್ಟಿಯನ್ನು ಕೊಟ್ಟು ೩-೪ ಸಾವಿರ ರೂಪಾಯಿ ಕೂಡಿಸಿ ಜೀರ್ಣೋ ದ್ಧಾರ ಮಾಡಿದರು ಅವರ ಈ ತರಹದ ಪ್ರವೃತ್ತಿಯ ಪರಿಣಾಮವೂ ಅಪ್ರತ್ಯಕ್ಷವಾಗಿ ನನ್ನ ಮೇಲೆಯೂ ಆಗಿರ ಬೇಕು.

ನಾನು ಹಾಯಸ್ಕೂಲಿನಲ್ಲಿದ್ದಾಗ ೧೮೯೫-೯೬ರಲ್ಲಿ ಧಾರ ವಾಡದಲ್ಲಿ ಶ್ರೀ. ಗುರೂಜಿ ಎಂಬವರು ಸಾರ್ವಜನಿಕ ಕಾರ್ಯಗಳ ಧುರೀಣರಾಗಿದ್ದರು. ಮ್ಯುನಿಸಿಪಾಲಿಟಿಗಳ ಆರಿ ಸುವಿಕೆಗಳಲ್ಲಿ ಓಣಿಓಣಿಗೆ ನಿಂತುಕೊಂಡು ಅವರೂ ಗದಗ ಕರ ಮುಂತಾದವರೂ ಭಾಷಣಗಳನ್ನು ಮಾಡುತ್ತಿದ್ದರು. ಗೋರಕ್ಷಣ ಸಂಸ್ಥೆಯು ತೆಗೆಯಲ್ಪಟ್ಟಿತ್ತು. ೨೦-೩೦ ಆಕಳು ಗಳನ್ನು ತೆಗೆದುಕೊಂಡು ಊರಲ್ಲೆಲ್ಲ ಚಳವಳಿ ಮಾಡಿದ ದೃಶ್ಯವು ಇನ್ನೂ ನನ್ನ ಕಣ್ಣುಮುಂದೆ ಕಟ್ಟಿದೆ. ಕೃಷ್ಣರಾವ ಮುದವೇಡೆಕರ, ಖಾನೋಳಕರ, ಹೊಸಕೇರಿ ಅಣ್ಣಾ ಚಾರ್ಯ ಮುಂತಾದ ತರುಣರು ಉತ್ಸಾಹದಿಂದ ಆ ಕಾರ್ಯ ದಲ್ಲಿ ನೆರವಾಗುತ್ತಿದ್ದರು. ಗಣಪತಿ ಮೇಳೆಗಳು ಹೊರಡುತ್ತಿ

ದ್ದವು. ಆದರೆ ಅವುಗಳಲ್ಲಿ ಮರಾಠೀ ಪದಗಳೇ ಬಹಳ. ರಾಮ
ಚಂದ್ರರಾವ ದೇಶಪಾಂಡೆಯವರು ಮಾತ್ರ ತಮ್ಮ ಕನ್ನಡದ
ಕಟ್ಟಾಭಿಮಾನದ ಮೂಲಕ, ಕನ್ನಡ ಮೇಳೆಗಳಿಗೆ ಉತ್ತೇ
ಜನ ಕೊಡುತ್ತಿದ್ದರು. ಇವೆಲ್ಲವುಗಳ ಪರಿಣಾಮವಾಗಿ
೧೯೦೭ನೆಯ ಇಸ್ವಿಯಲ್ಲಿ ನನಗೂ ನನ್ನ ಕೆಲ ಮಿತ್ರರಿಗೂ
ಕನ್ನಡ ಮೇಳೆಯನ್ನು ತೆಗೆಯುವ ಸ್ಫೂರ್ತಿಯುಂಟಾಯಿತು.
ನಮ್ಮ ಪೈಕಿ ನಮ್ಮ ಮಿತ್ರನಾದ ಲಕ್ಷ್ಮಣ ಘಟಿಕಾರ
ನೆಂಬವನು ಕವಿ. ಆತನು ೧೫-೨೦ ಪದಗಳನ್ನು ಕಟ್ಟಿ
ದನು. "ಗಜಾನನ ಸ್ತವನ" ಎಂಬ ಆ ಚಿಕ್ಕ ಹೊತ್ತಿಗೆ
ಯನ್ನು ನಾನು ನನ್ನ ಹೆಸರಿನಲ್ಲಿ ಪ್ರಕಾಶಪಡಿಸಿದೆನು.
ಮುಂದೆ, ಕೆಲವು ದಿನಗಳಲ್ಲಿಯೇ ಲೋಕಮಾನ್ಯ ಟಿಳಕರ
ಮೇಲಿನ ಖಟ್ಲೆಯಲ್ಲಿ "ಭವಾನೀ ತಲವಾರ" ಎಂಬ ಲೇಖ
ವನ್ನು ಬರೆದವರು ಶ್ರೀ. ಗುರೂಜಿ ಎಂಬ ಸಂಶಯ
ದಿಂದ, ಅದರ ಮೂಲ ಪ್ರತಿಯನ್ನು ಹಿಡಿಯುವುದಕ್ಕೆ
ರಾಜಹಂಸ ಮುದ್ರಣಾಲಯದ ಮೇಲೆ ಸರ್ಚವಾರಂಟ
ಹೊರಟಿತು. ಧಾರವಾಡದಲ್ಲಿ ಅದೇ ಮೊದಲನೆಯ ಸರ್ಚ
ವಾರಂಟು. ಆಗ ಮಂಗಳವಾರ ಪೇಟೆಯಲ್ಲಿ ದೇಸಾಯರ
ಓಣಿಯ ಹತ್ತರ ರಾಜಹಂಸ ಮುದ್ರಣಾಲಯವಿತ್ತು.
ಎರಡು ಗಂಟೆ ರಾತ್ರಿ ಇದ್ದಾಗ ಪೋಲಿಸರು ಮುದ್ರಣಾ
ಲಯವನ್ನು ಒಳನುಗ್ಗಿದರು. ಕಾಮನಕಟ್ಟೆಯ ವರೆಗೆ
ಸಜ್ಜಾಗಿ ಶಿಪಾಯರು ನಿಂತಿದ್ದರು. ಆ ರಾಜಹಂಸ ಮುದ್ರ
ಣಾಲಯದಲ್ಲಿಯೇ ನಮ್ಮ 'ಗಜಾನನ ಸ್ತವನ'ವೂ ಮುದ್ರಿತ
ವಾಗಿತ್ತು. ಅದನ್ನೂ ಜಪ್ತಮಾಡಿ, ನನ್ನ ಮತ್ತು ಘಟಿಕಾರ
ಇವನ ಮೇಲೆ ಎಲ್ಲಿ ಖಟ್ಲೆಮಾಡುವರೋ ಎಂದು ಕುತೂ

ಹಲವುಂಟಾಗಿತ್ತು. ಕುತೂಹಲವೆಂದು ಎನ್ನುವ ಕಾರಣ ವೆಂದರೆ ಆಗ ನಮಗೆ ಸೆರೆಮನೆಯ ಕಲ್ಪನೆ ಏನೂ ಇರದೆ ಲೋಕಮಾನ್ಯರ ಪಙ್ತಿಯಲ್ಲಿ ನಾವೂ ಬರಬಹುದೆಂಬ ಅಭಿ ಮಾನ ಮಾತ್ರ ಇತ್ತು! ನಮ್ಮ ಮೇಲೆ ಖಟ್ಲೆಯಾಗುವು ದಂತೂ ನಿಶ್ಚಯವೆಂದು ತೀರ್ಮಾನಿಸಿಬಿಟ್ಟೆವು. ಮುಂದೆ ಮಾಡುವು ದೇನು ? ಲೋಕಮಾನ್ಯರಂತೆ, ಡಿಫೆನ್ಸ ತಯಾರ ಮಾಡ ವುದು ! ಆ ಪದಗಳನ್ನೆಲ್ಲ ಪುನಃ ಪುನಃ ತಿರುವಿಹಾಕಿ ನಾನೂ ನನ್ನ ಗೆಳೆಯರೂ ಡಿಫೆನ್ಸ ತಯಾರು ಮಾಡಿ ದೆವು ! ಆದರೆ ಒಂದು ಮಾತನ್ನು ಮಾತ್ರ. ಯಾವ ರೀತಿಯಿಂದಲೂ ಸಮರ್ಥಿಸುವುದು ಶಕ್ಯವಿಲ್ಲೆಂದು ಕಂಡು ಬಂದಿತು. ಅದಾವುದೆಂದರೆ ಒಂದು ಪದದಲ್ಲಿದ್ದ 'ಭರತ ಭೂಮಿಯು ಮರಳಿ ಸ್ವಾತಂತ್ರ್ಯವನ್ನು ಪಡೆಯಲಿ' ಎಂಬ ಮಾತು ಆಗಿನ ಕಾಲಕ್ಕೆ ರಾಜಕೀಯ ಸ್ವಾತಂತ್ರ್ಯದ ಕಲ್ಪನೆಯೇ ಉದಯವಾಗಿದ್ದಿಲ್ಲ ನಾವು ಸ್ವಾತಂತ್ರ್ಯವನ್ನು ಪಡೆಯುವುದೆಂದರೆ ಇಂಗ್ಲಿಷರನ್ನು ಹೊರಗೆ ಹಾಕುವುದಲ್ಲವೆ? ಇದನ್ನು ಯಾವ ರೀತಿಯಿಂದ ಸಮರ್ಥಿಸಬೇಕು ? ರಾತ್ರಿ ಯೆಲ್ಲ ಕುಳಿತುಕೊಂಡು ನಾವೆಲ್ಲರೂ ವಿಚಾರಮಾಡಿದೆವು. ಏನೂ ಹೊಳೆಯಲಿಲ್ಲ. ಕೊನೆಗೆ ಕಿಟಲ್ ಡಿಕ್ಶನರಿಗೆ ಶರಣುಹೋದೆವು. ಅವಳು ನಮಗೆ ಅಭಯವಚನವನ್ನಿ ತ್ತಳು ! ಮರಳಿ ಎಂದರೆ ಹುಚ್ಚಿ = a foolish woman. ಆಯಿತು! ಆ ಪದದಲ್ಲಿ ನಾವು ಬೇಡಿದ್ದು ಸ್ತ್ರೀ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯವಲ್ಲ ! ಹಾಯಕೋರ್ಟ ಜಡ್ಜರ ಮುಂದೆ ಇದು ನಮ್ಮ ನಿರುತ್ತರವಾದ ಸಮರ್ಥನ! ಸರ ಕಾರದವರು ಆ ಪುಸ್ತಕವನ್ನು ಮಿಕ್ಕ ಕಾಗದಪತ್ರಗಳೊಂದಿಗೆ

ಜಪ್ತಮಾಡಿಕೊಂಡು ಹೋಗಿದ್ದರೂ ಹೋಗಿರಬಹುದು. ಆದರೆ ಅವರು ಅದರ ಕಡೆಗೆ ಕಣ್ಣೆತ್ತಿಕೂಡ ನೋಡಲಿಲ್ಲ! ಹೀಗಾಗಿ ನಾವು "ದೇಶಭಕ್ತ" ರಾಗುವ ಆ ಸುಸಂಧಿಯನ್ನು ಕಳೆದುಕೊಂಡೆವು!

ನಮ್ಮ ಹಿರಿಯರ ಸ್ವಭಾವವು ಮಾನೀಸ್ವಭಾವವು ಅವರಿಗೆ ಅಪಮಾನವು ತಿಲಪ್ರಾಯವೂ ಸಹನವಾಗುತ್ತಿದ್ದಿಲ್ಲ. ನವಕರಿಯಲ್ಲಿದ್ದಾಗ, ತಮ್ಮ ಕೆಲಸವಾಯಿತು, ತಾವಾಯಿತು. ಆದರೆ, ಸರಕಾರೀ ನವಕರಿಯಲ್ಲಿರುವವರಿಗೆ ಇದೊಂದು ದೋಷವೇ ಆಗಿತ್ತು. ಏಕೆಂದರೆ, ಮೇಲಧಿಕಾರಿಗಳಿಗೆ ಕೈಕೆಳಗಿನವರು ತಮ್ಮ ಇಚ್ಛಾನುವರ್ತಿಗಳಾಗಿ ನಡೆಯಬೇಕೆಂದು ಎನ್ನಿಸುತ್ತದೆ. ೧೮೯೩-೪ ರ ಸುಮಾರಕ್ಕೆ ನಮ್ಮ ತಂದೆಯವರು ಕರ್ಜಗಿಯಲ್ಲಿ ಶಿರಸ್ತೇದಾರರಾಗಿರುವಾಗ, ನಮ್ಮ ತಂದೆಯವರಿಗೂ ಮಾಮಲೇದಾರರಿಗೂ ವಾದ ಬಿತ್ತು. ಶಿರಸ್ತೇದಾರನು ಹೆಡ್ ಕಾರಕೂನನಾದುದರಿಂದ ಆತನೂ ಕಾರಕೂನನಂತಿರಬೇಕೆಂದು ಅವರ ಅಂಬೋಣ. ಶಿರಸ್ತೇದಾರನು ಮ್ಯಾಜಿಸ್ಟ್ರೇಟನಾದುದರಿಂದ ಆತನು ಸ್ವತಂತ್ರ ಅಧಿಕಾರಿಯೆಂದು ನಮ್ಮ ತಂದೆಯವರ ಅಂಬೋಣ. ಈ ವಾದದಿಂದ ಅವರಿಬ್ಬರಲ್ಲಿ ಮನಸ್ತಾಪವುಂಟಾಯಿತು. ನಮ್ಮ ಹಿರಿಯರು ಮಾಮಲೇದಾರರೊಡನೆ ಮಾತುಬಿಟ್ಟರು. ನಮ್ಮ ತಂದೆಯ ಮಿತ್ರರು, ನಮ್ಮ ತಂದೆಯವರಿಗೆ ಬೇರೆ ಕಡೆಗೆ ವರ್ಗಮಾಡಿಸಿಕೊಳ್ಳಲು ಉಪದೇಶ ಮಾಡಿದರು. ಆದರೆ ಅವರು ಒಪ್ಪಲಿಲ್ಲ. ಅದೇ ಊರೊಳಗಿದ್ದೇ ಎರಡು ವರ್ಷ ಕೆಲಸಮಾಡಿದರು. ಚೀಟಿ ಚಪಾಟಿಗಳಮೇಲೆ ಅವರಿಬ್ಬರೊಳಗೆ ಸರಕಾರೀ ವ್ಯವ

ಹಾರ ನಡೆಯುತ್ತಿತ್ತು. ಆ ಮಾಮಲೇದಾರರು ನಮಗೆ ಒಂದು ತರಹದಿಂದ ಆಪ್ತರು. ಮುಂದೆ ಅವರ ಮನೆಯಲ್ಲಿ ಒಂದು ಲಗ್ನವು ಹೂಡಲ್ಪಟ್ಟಿತು. ಅವರ ಬೀಗರೂ ನಮಗೆ ಆಪ್ತರು, ಮತ್ತು ನಮ್ಮ ತಂದೆಯವರ ಸ್ನೇಹಿತರು. ಆ ಮದುವೆಗೆ ತಾವು ಆ ಮಾಮಲೇದಾರರ ಮನೆಗೆ ಹೋಗುವ ಪ್ರಸಂಗ ಬರಬಹುದೆಂದು, ಮದುವೆಗೆ ಮುಂಚಿತವಾಗಿ ಒಂದೆರಡು ತಿಂಗಳ ರಜೆ ತೆಗೆದುಕೊಂಡು ಊರಬಿಟ್ಟು ಹೋಗಿಬಿಟ್ಟರು. ಅವರು ತಮ್ಮೊಳಗಿನ ವಾದವನ್ನು ತಮ್ಮ ಮುಟ್ಟಿಗೆ ಇಟ್ಟುಕೊಂಡಿದ್ದರು. ತಮ್ಮ ಹೊರತಾಗಿ ಮಿಕ್ಕ ನಮ್ಮೆಲ್ಲರಿಗೆ ಆ ನಿರ್ಬಂಧವನ್ನು ಹಾಕಿದ್ದಿಲ್ಲ.

ನಮ್ಮ ತಂದೆಯವರು ಮಾನೀಸ್ವಭಾವದವರಿದ್ದಂತೆ ಚಾಣಾಕ್ಷರೂ ಧೂರ್ತರೂ ಕೂಡ ಇದ್ದರು. ಅವರ ಖಾಸ ಸೋದರಮಾವನ ಮಕ್ಕಳಾದ ಹನುಮಂತರಾವ ಬಲಕುಂದಿ ಎಂಬವರು ಕ್ರಾಫರ್ಡರೆಂಬ ಪ್ರಸಿದ್ಧ ಕಮಿಶನರರ ಪಟ್ಟಶಿಷ್ಯರು. ಹನುಮಂತರಾಯರು ಹೇಳಿದಂತೆ ಕ್ರಾಫರ್ಡ ಸಾಹೇಬರು ಕೇಳುತ್ತಿದ್ದರು. ಹನುಮಂತರಾಯರು ಅನೇಕ ಜನರಿಗೆ ಆಗ ಮಾಮ್ಲತಿ ಮುಂತಾದ ನವಕರಿಗಳನ್ನು ಕೊಡಿಸಿದರು. ಆ ಮೋಹಕ್ಕೆ ಬಿದ್ದಿದ್ದರೆ ನಮ್ಮ ತಂದೆಯವರಿಗೂ ಸಹಜವಾಗಿ ಮಾಮಲತಿ ಸಿಗಬಹುದಾಗಿತ್ತು. ಆದರೆ ಅವರು ಆ ಮೋಹಕ್ಕೆ ಬೀಳಲಿಲ್ಲ. ಅದಕ್ಕೆಂದೇ ಆ ಇದ್ದ ನವಕರಿಯಾದರೂ ಉಳಿಯಿತು. ಏಕೆಂದರೆ ಮುಂದೆ ಕ್ರಾಫರ್ಡ ಪ್ರಕರಣದಲ್ಲಿ ಅನೇಕರು, ಹೀಗೆ ದೊರಕಿಸಿದ ನವಕರಿಗಳನ್ನು ಕಳೆದುಕೊಂಡೂ ಬಿಟ್ಟರು. ಹನುಮಂತ

ರಾಯರು ಸಾಯುಸಾಯುವ ಮುಂದೆ ನಮ್ಮ ಮನೆಯಲ್ಲಿಯೇ ಇದ್ದರು. ಈ ರೀತಿಯಾಗಿ ತಾವು ಲಂಚತಿಂದ ಹಣ ಸುಮಾರು ೧೫-೨೦ ಲಕ್ಷ ರೂಪಾಯಿ ಆಗಬಹುದೆಂದು ಅವರು ನನಗೆ ಹೇಳುತ್ತಿದ್ದರು ಅವರು ಅವೆಲ್ಲವನ್ನೂ ಖರ್ಚುಮಾಡಿಬಿಟ್ಟರು ! ಒಂದು ವಿಶೇಷವೇನೆಂದರೆ ಅವರು ಹಿಡಿಯಲ್ಪಟ್ಟು ಶಿಕ್ಷೆಯನ್ನು ಅನುಭವಿಸಿದರೂ ಅವರು ಕ್ರಾಫರ್ಡರ ಹೆಸರನ್ನು ತೆಗೆದುಕೊಳ್ಳಲಿಲ್ಲವಂತೆ ! ಇಷ್ಟು ಶ್ರೀಮಂತಿಕೆಯನ್ನು ಅನುಭವಿಸಿದರೂ ಅವರು ಶಿಕ್ಷೆಹೊಂದಿ ಬಂದಬಳಿಕ, ವೇದಾಂತದಲ್ಲಿ ಪಾರಂಗತರಾಗಿ, ತತ್ವ ಪ್ರಕಾಶ ಮುಂತಾದ ಗ್ರಂಥಗಳನ್ನು ಕನ್ನಡದಲ್ಲಿ ಭಾಷಾಂತರಿಸತೊಡಗಿದ್ದರು. ನಾನು ವಕೀಲನಾಗಿದ್ದಾಗ, ಅವರು ನಮ್ಮ ಮನೆಯಲ್ಲಿ ವಾಸಿಸಿದ್ದರು. ಮತ್ತು ನನ್ನಿಂದ ಆ ಭಾಷಾಂತರವನ್ನು ಬರೆಯಿಸುತ್ತಿದ್ದರು ಆದರೆ ಮುಂದೆ ಸ್ವಲ್ಪೇ ದಿನಗಳಲ್ಲಿ ಅವರು ತೀರಿಕೊಂಡರು.

**ಹಾಯಸ್ಕೂಲಿನ ಅನುಭವ.**—ನಾನು ಧಾರವಾಡ ಸರಕಾರೀ ಹಾಯಸ್ಕೂಲಿನಲ್ಲಿ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆ ಆಗುವವರೆಗೆ ಕಲಿತೆನು. ಆಗ ಕೇಸಕರ ಎಂಬವರು ಹೆಡ್‌ಮಾಸ್ತರರಾಗಿದ್ದರು. ಅವರು ಇಂಗ್ಲಿಷಿನಲ್ಲಿ ಅತ್ಯುತ್ತಮ ಪಂಡಿತರು. ಒಳ್ಳೇ ಮೋಹಕ ವಕ್ತಾರರು. ಧಾರವಾಡಕ್ಕೆ ಯಾರೇ ದೊಡ್ಡದೊಡ್ಡ ವ್ಯಾಖ್ಯಾತೃಗಳು ಬರಲಿ, ಕೇಸಕರರಿಗೆ ಅಧ್ಯಕ್ಷಪದವಿ ಕಟ್ಟಿಟ್ಟದ್ದೆ. ಈಗಿನಂತೆ ಆಗ, ಮಾಸ್ತರ ಜನರು ಸಾರ್ವಜನಿಕ ಜೀವನದಿಂದ ಇಷ್ಟು ಅಲಿಪ್ತರಾಗಿ ಉಳಿಯುತ್ತಿರಲಿಲ್ಲ. ಕೇಸಕರರ ಹಿಂದೆ ಇದ್ದ ಕಾಣೆ ಎಂಬವರಂತೂ ಮಿತ್ರಸಮಾಜವೇ ಮುಂತಾದ

ನಾವು ಗಾಬರಿಯಾದೆವು. ತುಸು ಹೊತ್ತಿನಮೇಲೆ ಅವರು ನಕ್ಕು 'ಸ, ಅಯಂ ಪಲ್ಲಿಂ (ಪಲ್ಲಿಃ ಅಲ್ಲ)ಗತಃ' ಎಂದು ಬಿಡಿಸಿ ಹೇಳಿದರು. ಆಗ ನಾವೂ ನಕ್ಕು ಸಮಾಧಾನ ಹೊಂದಿದೆವು. ಅರಬಟ್ಟಿ ಮಾಸ್ತರರೆಂದರೆ ಅತ್ಯಂತ ವಿದ್ವಾಂಸರು. ಆವರ ಪರೀಕ್ಷೆಗೆ ತಕ್ಕಷ್ಟೇ ಕಲಿಸುವುದು ಅವರಿಗೆ ಗೊತ್ತೇ ಇರಲಿಲ್ಲ. ನಾನು ಏಳನೆಯ ಇಯತ್ತೆಯಲ್ಲಿದ್ದಾಗ, ಅವರಿಂದ ಸಂಸ್ಕೃತ ಹೇಳಿಸಿಕೊಂಡೆನು. ಆದರೆ ಮೂರು ತಿಂಗಳಾದರೂ ರಘುವಂಶ ೨ನೆಯ ಸರ್ಗದ ಹತ್ತು ಶ್ಲೋಕಗಳು ಮುಗಿಯಲಿಲ್ಲ. ಒಂದು ಶಬ್ದ ತೆಗೆದುಕೊಂಡರೆ, ಅದರ ಯಾವತ್ತೂ ರೂಪಗಳು ಮುಗಿಯಬೇಕು. ಒಂದು ಧಾತುವಿನ ವರ್ತಮಾನಕಾಲದ ರೂಪ ಮೊದಲ್ಗೊಂಡು ಅಯ್ಯೋಅರಿಷ್ಟ (Aorist)ದ ವರೆಗೆ ಪಾಟಬೇಕು. ಮುಂದೆ ಆವರು ಮುಲ್ಕಿಖಾತೆಗೆ ಸೇರಿದರು. ಅಲ್ಲಿಯ ಕೆಲಸದಲ್ಲಂತೂ ಅವರು ಮತ್ತಿಷ್ಟು ನಿರುಪಯೋಗಿಗಳಾದರು. ಆದರ ಅವರು ಅತ್ಯಂತ ಪ್ರಾಮಾಣಿಕರು, ತತ್ವನಿಷ್ಠರು. ವಿದ್ವಾಂಸರಾದುದರಿಂದ ಸರಕಾರದ ವರದಿಗಳನ್ನು ಬರೆಯುವುದರಲ್ಲಿ ಅವರ ವಿದ್ವತ್ತೆಯ ಉಪಯೋಗವಾಗುತ್ತಿತ್ತು. ಅವರು ಧೈರ್ಯವಂತರು. ಹೋದ ಯುದ್ಧದಲ್ಲಿ ಅವರು ನವಕರಿಯಲ್ಲಿದ್ದರೂ ವಾರ್ ಫಂಡು ಕೊಡುವುದಿಲ್ಲವೆಂದು ಹೇಳಿದರಂತೆ! ನಾನು ೧೯೨೦ರಲ್ಲಿ ಅಖಿಲಕರ್ನಾಟಕ ರಾಷ್ಟ್ರೀಯಪರಿಷತ್ತನ್ನು ಕೂಡಿಸಿದಾಗ ಅವರು ನನ್ನೊಡನೆ ಹೆಗಲಿಗೆ ಹೆಗಲು ಹಚ್ಚಿ ಕೆಲಸಮಾಡಿದರು. ನಮ್ಮ ಮಾಸ್ತರರಲ್ಲಿ ಜೋಸಿ ವಿನಾಯಕರಾಯರು ಬಹಳ ಲೋಕಪ್ರಿಯರು ಮತ್ತು ಶಾಂತಸ್ವಭಾವದವರು.

ಅವರ ಪ್ರೀತಿಯ ವಿದ್ಯಾರ್ಥಿಗಳಲ್ಲಿ ನಾನೊಬ್ಬನು. ಅವರಿಗೆ ವರ್ಗವಾದಾಗ ನಾವು ಹುಡುಗರು ತಾಂಬೂಲ ಸಮಾರಂಭ ಮಾಡಿದೆವು. ಕಿತ್ತೂರ ಮಾಸ್ತರರು ಜೋಸಿಯವರ ಬಗ್ಗೆ ಸಂಸ್ಕೃತ ಶ್ಲೋಕ ಮಾಡಿಕೊಟ್ಟರು; ನಾನು ಅಂದು ತೋರಿಸಿದೆ. ಅದರಲ್ಲಿ "ಬಾಲಕಹಿತನಿರತಂ ಶಾಂತಂ। ಬಾಲಾಜ್ಞಾನಹರಂ ಸತತಂ ॥ ಜೋಸಿಕುಲೋನ್ನತಿ ಹೇತುಂ, ವಿನುತಂ" ಎಂಬದಿಷ್ಟು ಈಗ ನೆನಪಿಗೆ ಬರುತ್ತದೆ. ಅವರ ಆಗಿನ ನಿಯಮಿತತನವೂ ಅಚ್ಚುಕಟ್ಟುತನವೂ ಈ ೮೦-೮೨ ವಯಸ್ಸಿನ ಮುಪ್ಪಿನಲ್ಲಿಯೂ ಅಚ್ಚಳಿಯದೆ ಉಳಿದಿರುವುದು ಅಚ್ಚರಿಯ ಸಂಗತಿ. ಧಾರವಾಡಸ್ಥರಿಗೆ ಅವರು ಆದರ್ಶಮೂರ್ತಿಗಳಾಗಿದ್ದಾರೆ. ಪೆನಶನರರಲ್ಲಿ ಅವರಿಗಿಂತ ಬುದ್ಧಿವಂತರು ಅನೇಕರಿರಬಹುದು, ಶ್ರೀಮಂತರೂ ಅನೇಕರಿದ್ದಾರೆ. ಆದರೆ, ಸಾರ್ವಜನಿಕ ಸೇವೆಯಲ್ಲಿ ನಿರತರಾದವರೂ ವಿದ್ಯಾಪ್ರೇಮಿಗಳೂ ಎಷ್ಟು ಜನರಿದ್ದಾರೆ? ಸಂಬಳಕೊಟ್ಟು ಒಬ್ಬ ಓದುವವನನ್ನಿಟ್ಟುಕೊಂಡು ಪ್ರತಿನಿತ್ಯ ಓದಿಸಿಕೊಳ್ಳುವುದರಲ್ಲಿಯೇ ಅವರು ಕಾಲಕಳೆಯುವುದನ್ನು ನೋಡಿ ಮಿಕ್ಕ ಅನೇಕ ಪೆನಶನರರು ತಲೆಬಗ್ಗಿಸಬೇಕು.

**ಆಗಿನ ಸಾರ್ವಜನಿಕ ವಾತಾವರಣ:**— ನಾನು ಸುಮಾರು ೫ ವರುಷದವನಿದ್ದಾಗ ರಾಷ್ಟ್ರೀಯಸಭೆ ಸ್ಥಾಪಿತವಾಯಿತು. ಆದರೆ, ದೇಶದಲ್ಲಿ ನಿಜವಾಗಿ ಚಳವಳಿಯು ಹಬ್ಬಿದ್ದು ೧೮೯೫-೯೬ರ ಸುಮಾರಕ್ಕೆ. ಅಂದರೆ, ಹಿಂದೂ ಧರ್ಮಶಾಸ್ತ್ರದ ಪ್ರಕಾರ ನಾನು ವಯಸ್ಸಿನಲ್ಲಿ ಬರುವುದಕ್ಕೂ ದೇಶದಲ್ಲಿ ರಾಷ್ಟ್ರೀಯ ಚಳವಳಿಗಳು ಪ್ರಾರಂಭವಾಗುವು

ದಕ್ಕೊ ಮೇಳುಕೂಡಿತು. ಆದಕಾರಣ, ಅನಾಯಾಸವಾಗಿ, ರಾಷ್ಟ್ರಕಾರ್ಯದಲ್ಲಿ ನನಗೆ ನನ್ನ ೧೬ನೆಯ ವಯಸ್ಸಿನಿಂದಲೇ ಕೆಲಮಟ್ಟಿಗೆ ಭಾಗ ತೆಗೆದುಕೊಳ್ಳುವ ಯೋಗವು ಒದಗಿತು ಮತ್ತು ಮುಂದೆ ನನ್ನ ಸುದೈವದಿಂದ ಇಲ್ಲಿಯವರೆಗೆ ಅದು ಹಾಗೆಯೇ ಸಾಗುತ್ತ ಬಂದಿದೆ ೧೮೯೬ ಮತ್ತು ೧೮೯೭ನೆಯ ಇಸ್ವಿಗಳೆಂದರೆ ದೇಶವನ್ನು ಅನೇಕ ರೀತಿಯಿಂದ ಅಲ್ಲೋಲಕಲ್ಲೋಲ ಮಾಡಿದ ವರ್ಷಗಳು ಹಿಂದುಸ್ಥಾನದಲ್ಲಿ ಮೊದಲಿಗೆ ಮುಂಬಯಿ ಪಟ್ಟಣಕ್ಕೆ ಪ್ಲೇಗು ಬಂದದ್ದು ೧೮೯೬ನೆಯ ಇಸ್ವಿಯ ನವಂಬರ ತಿಂಗಳಲ್ಲಿ. ಹಾ ಹಾ ಎನ್ನುವುದರೊಳಗೆ ಅದು ಪುಣೆಯಲ್ಲಿ ಹಬ್ಬಿ ಹಾಹಾಕಾರವನ್ನುಂಟುಮಾಡಿತು ಅದನ್ನು ಒಮ್ಮೆಲೆ ತಡೆದು ನಿಲ್ಲಿಸಬೇಕೆಂಬ ಸದುದ್ದೇಶದಿಂದ ಸರಕಾರದವರು ಅತ್ಯಂತ ಕಠೋರವಾದ ಉಪಾಯಗಳನ್ನು ಕೈಕೊಂಡರು. ಪ್ಲೇಗಂತೂ ನಿಲ್ಲಲೇ ಇಲ್ಲ, ಅದಕ್ಕೆ ಬದಲಾಗಿ, ಸರಕಾರದವರ ನಿರ್ದಯದ ಉಪಾಯಗಳ ಮೂಲಕ ಪುಣೆಯಲ್ಲಿ ಅತ್ಯಂತ ಕ್ಷೋಭೆ ಉಂಟಾಯಿತು ಸೋಲ್ಜರ ಜನರು ಮನೆಗಳನ್ನು ಹೊಕ್ಕು ಸಾಮಾನುಗಳನ್ನು ಹೊರಗೆಳೆಯುವುದು, ಅರಿವೆ ಅಂಚಡಿಗಳನ್ನು ಸುಡುವುದು ಇವೇ ಮುಂತಾದ ಅತ್ಯಾಚಾರಗಳನ್ನು ಮಾಡಿದರು. ಆ ಮೂಲಕ ಪುಣೆಯ ಜನರೆಲ್ಲರೂ ರೇಗಿಗೊಂಡರು. ಇತ್ತ ಧಾರವಾಡ ಬೆಳಗಾವಿಯ ಕಡೆಗೆ ಅದು ಹಬ್ಬಬಾರದೆಂದು, ಉಗೆಬಂಡಿಯೊಳಗಿಂದ ಬರುವ ಪ್ರವಾಸಿಕರಿಗೆ ಕ್ವಾರಂಟಾಯಿನ ಮುಂತಾದವುಗಳ ಮೂಲಕ ತೊಂದರೆಯಾಯಿತು. ಇಷ್ಟಾದರೂ ಪ್ಲೇಗು ೧೮೯೭ನೆಯ ಅಕ್ಟೋಬರ ಸುಮಾರಕ್ಕೆ ಹುಬ್ಬಳ್ಳಿಗೆ ಬಂದೇ

ಬಿಟ್ಟಿತು. ಜನರ ಆಗಿನ ಗೋಳನ್ನು ವರ್ಣಿಸುವುದು
ಅಸಾಧ್ಯ. ೧೯೦೭ನೆಯ ಇಸ್ವಿಯ ಕೊನೆಯ ಒಳಗಾಗಿ
ಧಾರವಾಡ, ಹುಬ್ಬಳ್ಳಿ ಮತ್ತು ಗದಗು ಈ ಊರು
ಗಳು ಪ್ಲೇಗಿನಿಂದ ದೂಷಿತವಾಗಿದ್ದವು. ಧಾರವಾಡದಲ್ಲಿ
ಸಿಗ್ರಿಗೇಶನ್ ಕ್ಯಾಂಪ ಚಾಲೂ ಆಗಿತ್ತು. ಏಪ್ರಿಲ ತಿಂಗ
ಳಲ್ಲಿ, ಧಾರವಾಡದ ಮಾರ್ಕೆಟಿನಲ್ಲಿ ಸೋಲ್ಜರರು ಬಂದ
ರೆಂಬ ಹೂಳಿ ಹುಟ್ಟಿ ಜನರು ದಿಕ್ಕಾಪಾಲಾಗಿ ಓಡಿ
ಹೋದರು. ಹುಬ್ಬಳ್ಳಿಯಲ್ಲಿ ಪ್ಲೇಗು ನಿಲ್ಲಿಸುವುದಕ್ಕೆ ಓಣಿ
ಓಣಿಗಳೇ ಸುಡಲ್ಪಡುತ್ತಿದ್ದವು.

ಆ ಕಾಲದಲ್ಲಿಯೇ ಪ್ಲೇಗಿನ ಮಂತ್ರಿಯಾಗಿ ದುಷ್ಕಾಳ
ರಾಯನೂ ಬಂದೇಬಿಟ್ಟರು. ೧೯೦೬-೦೭ನೆಯ ಇಸ್ವಿ
ಗಳಂದರೆ ಭಯಂಕರ ಬರಗಾಲದ ಕಾಲ. ಧಾರವಾಡ
ಪಟ್ಟಣದಲ್ಲಿ ಆಗ ದರೋಡೆಗಳ ಮೇಲೆ ದರೋಡೆಗಳು!
೧೯೦೭ನೆಯ ಇಸ್ವಿಯಲ್ಲಿ ಹುಬ್ಬಳ್ಳಿಯ ಪೇಟೆಯು ದುಷ್ಕಾ
ಳದ ಮೂಲಕ ಎರಡು ಸಲ ಲೂಟಿಮಾಡಲ್ಪಟ್ಟಿತು. ಜನರು
ಅಷ್ಟು ಅನ್ನಾನ್ನ ಗತಿಕರಾಗಿದ್ದರು.

ಆದರೆ, ಹೀಗೆ ದೈವೀ ಆಪತ್ತುಗಳೊದಗಿದ್ದರೂ, ಸಾರ್ವ
ಜನಿಕ ಚಟುವಟಿಕೆಗಳು ನಡೆದೇ ಇದ್ದವು. ಪುಣೆಯ
ಪಟ್ಟಣವು ಸಾರ್ವಜನಿಕ ಚಳವಳಿಗಳ ಆಗಿನ ಉಗಮ
ಸ್ಥಾನವು. ಲೋ. ಟಿಳಕರು ಗಣಪತಿ ಉತ್ಸವ ಮತ್ತು
ಶಿವಾಜಿ ಉತ್ಸವಗಳ ಮೂಲಕ ರಾಷ್ಟ್ರವನ್ನು ಚೇತರಿಸಿ
ದ್ದರು. ಅವುಗಳ ಪರಿಣಾಮವು ಧಾರವಾಡದ ಮೇಲೆಯೂ
ಆಯಿತು. ಇಲ್ಲಿಯೂ ಆ ಉತ್ಸವಗಳು ಜರುಗುತ್ತಿ
ದ್ದವು. ಮೇಳಗಳು ಆಗುತ್ತಿದ್ದವು. ಅವುಗಳಲ್ಲಿ ಮಿಕ್ಕ

ವರಂತೆ ನಾನೂ ಯಥೇಚ್ಛನಾಗಿ ಭಾಗತೆಗೆದುಕೊಳ್ಳುತ್ತಿದ್ದೆನು. ೧೮೯೭ನೆಯ ಮೇ ತಿಂಗಳಿನಲ್ಲಿ ಧಾರವಾಡ, ಕುಂದಗೋಳ, ಬಾದಾಮಿ ಮುಂತಾದ ಊರುಗಳಲ್ಲಿ ಶಿವಜಯಂತಿ ಉತ್ಸವಗಳು ನಡೆಸಲ್ಪಟ್ಟವು ಜೂನ ತಿಂಗಳಲ್ಲಿ ಧಾರವಾಡದಲ್ಲಿ ಶಿವಾಜಿಯ ರಾಜ್ಯಾಭಿಷೇಕೋತ್ಸವವು ದೊಡ್ಡ ಪ್ರಮಾಣದಲ್ಲಿ ಜರುಗಿಸಲ್ಪಟ್ಟಿತು ಆಗಿನ ಉತ್ಸವಗಳ ಕಾರ್ಯಕ್ರಮವೆಂದರೆ, ಮೇಳಗಳು, ಕುಸ್ತಿಗಳು, ಉಪನ್ಯಾಸಗಳು, ಐತಿಹಾಸಿಕ ಲಾವಣಿಗಳು ಮತ್ತು ಅನ್ನಸಂತರ್ಪಣೆ. ೧೮೯೭ನೆಯ ಗಣಪತಿ ಉತ್ಸವದ ಕಾಲಕ್ಕೆ ನಾನು ಮುದ್ರಿಸಿದ "ಗಜಾನನಸ್ತವನ"ದ ಕಥೆಯು ಹಿಂದೆ ಬಂದೇ ಇದೆ (ಪು ೪೦)

೧೮೯೬ ಮತ್ತು ೧೮೯೭ ಈ ವರುಷಗಳು ಮತ್ತೂ ಅನೇಕ ದೃಷ್ಟಿಯಿಂದ ಕ್ಷೋಭಕಾರಕ ವರ್ಷಗಳಾಗಿದ್ದವು. ೧೮೯೩-ನೆಯ ಇಸ್ವಿಯಲ್ಲಿ ಸ್ವಾಮಿ ವಿವೇಕಾನಂದರು ಅಮೇರಿಕೆಯಲ್ಲಿ ಸನಾತನ ಧರ್ಮದ ವಿಜಯ ಪತಾಕೆಯನ್ನು ಊರಿದರು. ಪ್ರೊ ಭಾನು ಇವರು ಶಿವಾಜಿ ಉತ್ಸವದಲ್ಲಿ ಮಾಡಿದ ಭಾಷಣವು ವಿಲಕ್ಷಣ ಚಳವಳಿಯನ್ನು ಮಾಡಿತು. ಪ್ರೊ. ಜೇನರಂಥವರು ಕೂಡ ಶಿವಾಜಿಯನ್ನು ಸ್ತುತಿಸಿ ಪ್ರೋತ್ಸಾಹಿಸಿದ್ದರು. ಲೋ. ಟಿಳಕರು ಪ್ಲೇಗು ಮತ್ತು ಬರಗಾಲದ ಬಗ್ಗೆ ಕೇಸರಿಯಲ್ಲಿ ಸರಕಾರದ ವಿರುದ್ಧವಾಗಿ ನಿರ್ದಾಕ್ಷಿಣ್ಯವಾದ ಟೀಕೆಗಳನ್ನು ಬರೆಯುತ್ತಿದ್ದರು ಇವೆಲ್ಲವುಗಳಿಗೆ ಕಳಸವಿಡುವಂತೆ, ಅದೇ ವರುಷ ಅಂದರೆ ೧೮೯೭ನೆ ಇಸ್ವಿಯ ಜೂನ ೨೨ನೆಯ ತಾರೀಖಿನ ದಿವಸ ವ್ಹಿಕ್ಟೋರಿಯಾ ಮಹಾರಾಣಿಯವರ ಜ್ಯುಬಿಲಿ ಮಹೋತ್ಸವದ ಶುಭಪ್ರಸಂಗದಲ್ಲಿ

ಚಾಫೇಕರ ಬಂಧುಗಳು ಪ್ಲೇಗಿನ ಅಧಿಕಾರಿಯಾದ ರ್‍ಯಾಂಡ
ಎಂಬವನನ್ನೂ ಐಯರ್ಸ್ಟ ಎಂಬ ಮತ್ತೊಬ್ಬ ಯುರೋಪಿ
ಯನ್ನನನ್ನೂ ಕೊಂದುಹಾಕಿದರು! ಆಯಿತು! ಸರಕಾರವು
ತನ್ನ ಸಹಿಪಂಜರವನ್ನು ಬಿಚ್ಚಿತು. ಮೊದಲನೆಯ ಹೊಡ್ತ
ಆಹುತಿಯಾದವರ ಟಿಳಕರು. ಟಿಳಕರು ಜುಲೈ ೨೭ರಲ್ಲಿ
ಬಂಧಿಸಲ್ಪಟ್ಟರು. ಸಪ್ಟಂಬರದಲ್ಲಿ ಅವರಿಗೆ ೧½ ವರುಷದ
ಕಠಿಣಶಿಕ್ಷೆ ವಿಧಿಸಲ್ಪಟ್ಟಿತು. ಡಿಸೆಂಬರಿನಲ್ಲಿ ಸರದಾರ ನಾತೂ
ಬಂಧುಗಳ ಬಂಧನವಾಯಿತು. ಇತ್ತ ಆದರ ಪಿಡುಗು ಘೋರ
ವಾದಕ್ಕೆ ಬಡಿದುಕೊಂಡಿತು. ದಬ್ಬಾಳಿಕೆಯು ಹೆಚ್ಚಾದಂತೆ
ಚಳವಳಿಯೂ ಜೋರಾಯಿತು. ಆ ವರ್ಷದ ಗಣಪತಿ ಉತ್ಸ
ವವು ಯಥಾಸಾಂಗವಾಗಿ ನಡೆಯಿತು. ಶ್ರೀ ಗುರೂಜಿಯ
ವರು ಬರೆದ 'ಭವಾನಿ ತಲವಾರ,' 'ಸಿಂಹಗಡ' ನಾಟಕ
ಮತ್ತು 'ಬಾಪು ಗೋಖಲ್ಯಾಚಿ ಪಗಡಿ' ಎಂಬ ಮರಾಠೀ
ಪುಸ್ತಕಗಳ ಹಸ್ತಪತ್ರಿಕೆಗಳನ್ನು ಹಿಡಿಯುವುದಕ್ಕೆ ರಾಜ
ಹಂಸ ಮುದ್ರಣಾಲಯಕ್ಕೆ ಸರ್ಚವಾರಂಟು ಬಂದದ್ದನ್ನು
ಹಿಂದೆ ಹೇಳಿಯೇ ಇದ್ದೇನೆ (ಪುಟ ೩೯).

ಇದಾಯಿತು, ರಾಷ್ಟ್ರದಲ್ಲಿ ಆ ವರುಷಗಳಲ್ಲಿ ನಡೆದ
ಸಾಮಾನ್ಯ ಚಳವಳಿಗಳ ವಿಷಯ. ಧಾರವಾಡದಲ್ಲಿಯೂ
ಆಗ್ಗೆ ಅನೇಕ ತರಹದ ಚಟುವಟಿಕೆಗಳು ನಡೆದಿದ್ದವು.
೧೮೯೫ನೆಯ ಇಸ್ವಿಯಲ್ಲಿ ಲೋ. ಟಿಳಕರ ಗುಂಪಿನವರಾದ
ನಾಮಜೋಶಿ ಎಂಬವರು ಸಂಕ್ರಮಣದ ದಿವಸ ವ್ಹಿಕ್ಟೋ
ರಿಯಾ ಹಾಯಸ್ಕೂಲಿನ ಆಟದ ಜಮಖಾನಾ ಬೈಲಿನಲ್ಲಿ
ಉಪನ್ಯಾಸ ಕೊಟ್ಟರು. ಆಗಿನ ದಿವಸಗಳಲ್ಲಿ ಸಂಕ್ರಮಣ,
ದಸರೆ ಮುಂತಾದ ಹಬ್ಬಗಳಲ್ಲಿ ಊರ ಜನರೆಲ್ಲರೂ ಬತ್ತ

ಟ್ಟಿಗೆ ಕಲಿತು ಉತ್ಸವ ಜರುಗಿಸುವ ಪದ್ಧತಿ. ನಾವು ಜೋಸಿಯವರ ವ್ಯಾಖ್ಯಾನಕ್ಕೆ ನಾನೂ ಹೋಗಿದ್ದೆನು. ಅವರು ಸ್ವದೇಶಿ ಉದ್ಯೋಗ ಧಂದೆಗಳ ವಿಷಯವಾಗಿ ಹೆಚ್ಚಿಗೆ ಮಾತಾಡಿದರು. ಸ್ವದೇಶಿ ಆಟಗಳ ವಿಷಯವೂ ಹೊರ ಟಿತ್ತು. ಆ ಸ್ಫೂರ್ತಿದಾಯಕ ಭಾಷಣದಿಂದ ಪ್ರೇರಿತರಾಗಿ, ಧಾರವಾಡದವರು ಅದೇ ವರುಷ 'ಪ್ರಾಚ್ಯಕ್ರೀಡಾ ಸಂವ ರ್ಧಕ ಮಂಡಲ'ವೆಂಬ ಸಂಸ್ಥೆಯನ್ನು ಸ್ಥಾಪಿಸಿದರು. ಆಗಿನ ಉಪದೇಶದ ಪರಿಣಾಮವು ನನ್ನ ಮೇಲೆ ಎಷ್ಟರಮಟ್ಟಿಗೆ ಆಯಿತೆಂದರೆ ಮುಂದೆ ನಾನು ಎಂದೆಂದೂ ಪರದೇಶೀ ಆಟ ಗಳನ್ನು ಈ ವರೆಗೆ ಆಡಿರುವುದಿಲ್ಲ. ಹಾಯಸ್ಕೂಲಿನಲ್ಲಿ ದ್ದಾಗ ತಿಳ್ಳಿ, ಚಿಣಿಫಣಿ, ಖೋ ಮುಂತಾದ ಆಟಗಳನ್ನು ಆಡುವ ಕ್ಲಬ್ಬನ್ನು ತೆಗೆದಿದ್ದೆನು. ಆ ಕ್ಲಬ್ಬಿನಲ್ಲಿ, ಕೇಸಕರ, ಜಾಂಭೇಕರ, ಮಂಗಳವೇಢೇಕರ ಮುಂತಾದ ನನ್ನ ಜೋಡಿ ಯವರಲ್ಲದೆ, ನನ್ನ ತಮ್ಮ ನಾನಾ, ಬೈತಮಂಗಲಕರ ಶ್ಯಾಮು ಮುಂತಾದ ಚಿಕ್ಕವರೂ ಇದ್ದರು (ಅದರ ಫೋಟೋ ನನ್ನ ಹತ್ತಿರ ಇನ್ನೂ ಇದೆ). ನಾನು ಕಾಲೇಜಿನಲ್ಲಿ ಸಹ ಕ್ರಿಕೆಟ್ ಟೆನಿಸ್ ಆಡಲಿಲ್ಲ ಕಾನಿಟಕರರು (ಮುಂದೆ ಪ್ರಿನ್ಸಿಪಾಲರಾದವರು) ತೆಗೆದ ತಿಳ್ಳಿ ಕ್ಲಬ್ಬಿನಲ್ಲಿ ಆಡುತ್ತಿದ್ದೆನು. ಮುಂದೆ, ವಕೀಲನಿದ್ದಾಗ, ಮಿತ್ರಸಮಾಜದಲ್ಲಿ ಟೆನಿಸ್ಸಿನ ಮೂಲಕ ಪರದೇಶಕ್ಕೆ ನಿಷ್ಕಾರಣವಾಗಿ ಹಣ ಹೋಗು ತ್ತದೆಂದೂ ಅದು ಉತ್ಕೃಷ್ಟ ಆಟವಾಗಿದ್ದರೂ ಬಡ ಹಿಂದು ಸ್ಥಾನಕ್ಕೆ ಹೆಚ್ಚಿನದು ಎಂದೂ ನಾವು ಕೆಲವರು ಮಾಡಿದ ತಕರಾರಿಗೆ ಕಿವಿಗೊಡದ ಮೂಲಕ, ನಾವೆಲ್ಲರೂ ಅಂದಿನಿಂದ ಮಿತ್ರಸಮಾಜಕ್ಕೆ ರಾಜೀನಾಮೆ ಕೊಟ್ಟೆವು; ಇರಲಿ.

ಧಾರವಾಡವು ಮೊದಲಿನಿಂದಲೂ ಸ್ವಂತ ಮತ್ತು ಸ್ವತಂತ್ರ ಸಂಸ್ಥೆಗಳ ಉಗಮಸ್ಥಾನವು ಅಮ ಬೆಳಗಾಂ ಮತ್ತು ವಿಜಾಪುರಗಳಂತೆ ಪುಣೆಗೆ ಸಮೀಪವಾಗಿರದೆ ಕರ್ನಾಟಕದ ಮಧ್ಯವರ್ತಿ ಸ್ಥಳವಾಗಿರುವುದೂ ಅದಕ್ಕೆ ಕಾರಣವಾಗಿರಬಹುದು. ಚಳವಳಿಗಳು ಹುಟ್ಟಬೇಕಾದರೂ ಆಯಾ ಚಳವಳಿಗಳ ಉತ್ಪಾದಕರೊಡನೆ ಕೆಲಮಟ್ಟಿಗೆ ಪರಿಚಯವಿರುವುದೂ ಮೊದಮೊದಲಿಗೆ ಅವಶ್ಯವಿರುತ್ತದೆ ಧಾರವಾಡದ ಸುದೈವದಿಂದ ಗುರೂಜಿಯಂಥ ಲೋಕಮಾನ್ಯರ ಪರಿಚಯಸ್ಥರು ಇದ್ದುದರಿಂದಲೆ ಇಲ್ಲಿ ಗೋರಕ್ಷಣ ಸಂಸ್ಥೆ, ಗಣಪತಿ ಉತ್ಸವ, ಶಿವಾಜಿ ಉತ್ಸವ ಮುಂತಾದವುಗಳು ಜೋರಿನಿಂದ ನಡೆದವು ಶ್ರೀಶಿವಾಜಿ ವಿಜಯ ಆರ್ಯಸಮಾಜವೆಂಬ ನಾಟಕ ಮಂಡಲವು ರಾಣಾ ಭೀಮದೇವ ಮುಂತಾದ ಮರಾಠಿ ನಾಟಕಗಳನ್ನು ಆಡಿ, ಜನರಲ್ಲಿ ರಾಷ್ಟ್ರೀಯ ಅಭಿಮಾನವನ್ನು ಹುಟ್ಟಿಸುತ್ತಿತ್ತು. ಆಗ ಸದರ್ನ ಮರಾಠಾ ರೇಲ್ವೆ ಹೆಡ್ ಆಫೀಸು ಧಾರವಾಡದಲ್ಲಿ ಇದ್ದುದು ಒಂದು ವಿಶೇಷ ಅನುಕೂಲ ಸಂಗತಿಯಾಗಿತ್ತು. ಅಲ್ಲಿಯ ಕಾರಕೂನರೇ ಮುಂತಾದವರು ಸುಶಿಕ್ಷಿತರಿದ್ದು, ಸರಕಾರೀ ನವಕರರಷ್ಟು ನಿರ್ಬಂಧಗಳು ಅವರಿಗೆ ಇದ್ದಿಲ್ಲ ಆದಕಾರಣ ಅವರು ಚಳವಳಿಗಳಲ್ಲಿ ಭಾಗ ತೆಗೆದುಕೊಳ್ಳುತ್ತಿದ್ದರು. ಈ ರಾಷ್ಟ್ರೀಯ ಚಳವಳಿಗಳ ಹೊರತಾಗಿ, ಅನೇಕ ಸ್ವತಂತ್ರ ಚಟುವಟಿಕೆಗಳು ಆಗ ಧಾರವಾಡದಲ್ಲಿ ನಡೆಯುತ್ತಿದ್ದವು. ಅವುಗಳಲ್ಲಿ ನಾಲ್ಕು ಮುಖ್ಯವಾದವುಗಳು (೧) ಕರ್ನಾಟಕ ವಿದ್ಯಾವರ್ಧಕ ಸಂಘ; (೨) ಶ್ರೀಶಂಕರಾಚಾರ್ಯ ಸಂಸ್ಕೃತ ಪಾಠ

ಶಾಲೆ; (೨) ಶ್ರೀಸಮರ್ಥವಿದ್ಯಾಂತೋತ್ತೇಜಕ ಸಭೆ; (೩) ವ್ಹಿಕ್ಟೋರಿಯಾ ಹಾಯಸ್ಕೂಲ ಶ್ರೀ ಗುರುನಾಥರಾವ ಘಾಟಕರಂಥ ಅದ್ವಿತೀಯ ಕೊಂಕಣಸ್ಥ ಮುಖಂಡರಿಗೂ ಕೂಡ ಪ್ರಸೆಯ ಪರಿಚಯವು ವಿಶೇಷವಿದ್ದಿಲ್ಲ ರಾಜಹಂಸ, ಚಂದ್ರೋದಯ, ಕರ್ನಾಟಕವೃತ್ತ, ಧನಂಜಯ, ಕರ್ನಾಟಕಪತ್ರ ಮುಂತಾದ ಕನ್ನಡ ಪತ್ರಿಕೆಗಳು ಹೊರಡಲಿಕ್ಕೆ ಧಾರವಾಡದ ಸ್ವತಂತ್ರ ವಾತಾವರಣವೇ ಕಾರಣ ಇವಲ್ಲದ ಲಗಾರಿಂದ ಸ್ವಾಚ್ಛ್ಯಕ್ರೀಡಾ ಸಂವರ್ಧಕ ಮಂಡಲವು ಸ್ಥಾಪಿತವಾಗಿ ಅದು ಸ್ವದೇಶೀ ಆಟಗಳನ್ನು ಆಡುವುದಲ್ಲದೆ, ಬನಾಟಿ ಉತ್ಸವವೇ ಮುಂತಾದ ಅನೇಕ ಚಟುವಟಿಕೆಗಳನ್ನು ಮಾಡುತ್ತಿತ್ತು. ಅದೇ ಸನೆಯ ಇಸ್ವಿಯಲ್ಲಿಯೇ ಗಾಯನ ಪಾಠಶಾಲೆಯು ಸ್ಥಾಪಿತವಾಗಿ ಕೆಲವು ವರ್ಷ ನಡೆಯಿತು ಆದರೆ, ಇನ್ನು ವರೆಗೆ ಕರ್ನಾಟಕ ಸಂಗೀತ ಸಮಾಜವು ಧಾರವಾಡದಲ್ಲಿ ಹುಟ್ಟದಿರುವುದು ಮಾತ್ರ ಶೋಚನೀಯ ಸಂಗತಿಯಾಗಿದೆ ಆ ವಿಷಯದಲ್ಲಿ, ನನ್ನ ಪ್ರಯತ್ನಗಳು ಇನ್ನೂ ಫಲಪ್ರದವಾಗಿಲ್ಲ ಸಂಸ್ಕೃತಾಭಿನಂದಿನೀ ಸಭೆ, ಸನಾತನ ಭಾರತ ಧರ್ಮಸಭೆ, ಮಹಾರಾಷ್ಟ್ರ ಭಾಷೋತ್ತೇಜಕ ಮಂಡಲ ಮುಂತಾದ ಸಂಸ್ಥೆಗಳೂ ಧಾರವಾಡದಲ್ಲಿ ಆಗ ತಕ್ಕಮಟ್ಟಿಗೆ ಕೆಲಸ ನಡೆಸಿದ್ದವು ಉದ್ಯೋಗಧಂದೆಯ ವಿಷಯದಲ್ಲಿ, ಅಳ್ನಾವರದ ಬಂಗಾರ ಕಣಿಯ ಕಂಪನಿಯು ಹೊರಟು ಅನೇಕರನ್ನು ಹಾಳುಮಾಡಿತು. ತೇಗೂರ ಕಬ್ಬಿಣದ ಆದರುಗಳಲ್ಲಿಯೂ ಕೆಲಸ ನಡೆದಿತ್ತು. ಶ್ರೀ. ವೆಂಕಟ ರಂಗೋ ಕಟ್ಟಿಯವರು ತಮ್ಮ ವಿಲಕ್ಷಣವಾದ ವ್ಯಾಪಕಬುದ್ಧಿಯಿಂದ

ಸೀಗೆಕಾಯಿ ಒಡೆಗಳನ್ನೂ ಆಯುರ್ವೇದ ಔಷಧಗಳನ್ನೂ ತಯಾರುಮಾಡಿದ್ದರು

ಒಟ್ಟಿಗೆ ನಾನು ಹಾಯಸ್ಕೂಲು ಬಿಡುವ ಪೂರ್ವದಲ್ಲಿಯೇ ದೇಶದ ಮತ್ತು ಧಾರವಾಡದ ಆಗಿನ ಕಾಲದ ವಿಶೇಷ ಚಟುವಟಿಕೆಗಳು ನನ್ನ ಮನಸ್ಸಿನಮೇಲೆ ಅಪ್ರತ್ಯಕ್ಷರೀತಿಯಿಂದ ಪರಿಣಾಮವನ್ನುಂಟುಮಾಡಿದ್ದವು. ೧೯೨೬-೨೭ನೆಯ ಇಸ್ವಿಯ ಘಟನೆಗಳು ನನ್ನ ಮನಸ್ಸನ್ನು ಕಲಕುಮಲಕಾಗಿ ಮಾಡಿದ್ದವು ಇಂಥ ಪರಿಸ್ಥಿತಿಯಲ್ಲಿ ನಾನು ಆ ವರುಷ ಮ್ಯಾಟ್ರಿಕ್ಯುಲೇಶನ ಪರೀಕ್ಷೆಯಲ್ಲಿ ಪಾಸಾಗಿ ನವಲಗುಂದದಲ್ಲಿ ಇರುತ್ತಿದೆನು ಇಲ್ಲಿಗೆ ನನ್ನ ಹಾಯಸ್ಕೂಲ ಜೀವನವು ಮುಗಿಯಿತು



೪ನೆಯ ಪ್ರಕರಣ

# ನನ್ನ ಪ್ರೌಢವಿದ್ಯಾರ್ಥಿದಸೆ ೧೮೯೮-೧೯೦೫

ಹೋದ ಪ್ರಕರಣದಲ್ಲಿ, ನಾನು ಎರಡು ತರಹದ ಸ್ಮೃತಿಗಳನ್ನು ಕೊಟ್ಟಿರುವೆನು (೧) ತಂದೆಯವರಿಗೆ ಸಂಬಂಧಿಸಿದವುಗಳು ಕೆಲವು (೨) ಸಾರ್ವಜನಿಕಕ್ಕೆ ಸಂಬಂಧಿಸಿದವುಗಳು ಕೆಲವು ಹೀಗೆ ನನ್ನ ಜೀವನಸ್ಮೃತಿಯಲ್ಲಿ ನನ್ನ ತಂದೆಯವರ ಜೀವನಸ್ಮೃತಿಗಳನ್ನು ನೋಡಿ ಕೆಲವರಿಗೆ ಆಶ್ಚರ್ಯವಾಗಬಹುದು ಆದರೆ, ನಾನು ಆರಿಸಿದ ಅವರ ಸ್ಮೃತಿಗಳೆಲ್ಲವೂ ಬಹುತರವಾಗಿ ನನ್ನ ಮನದಲ್ಲಿ ನನ್ನ ಜೀವನ ಕಾರ್ಯದ ಬೀಜಗಳನ್ನು ಬಿತ್ತಿದವುಗಳೇ ಎಂಬುದನ್ನು ಮರೆಯಬಾರದು. ಅವುಗಳಿಗೆ ಮೊಳಕೆಯೊಡೆದುದನ್ನು ಮುಂದೆ ವಾಚಕರು ಕಾಣಬಹುದು.

ನಾನು ಹಿಂದೆ ಹೇಳಿದಂತೆ ನನ್ನ ೧೫-೧೬ನೆಯ ವಯಸ್ಸಿನಿಂದಲೇ ಸಾರ್ವಜನಿಕ ಚಟುವಟಿಕೆಗಳಲ್ಲಿ ಬಿದ್ದು, ಇಂದಿನವರೆಗೆ ಅಂದರೆ ಸುಮಾರು ೪೫ ವರುಷ ಒಂದಿಲ್ಲೊಂದು ಬಗೆಯಲ್ಲಿ ಸೇವೆಮಾಡುತ್ತ ಬಂದಿರುವೆನೆಂಬುದು ನಿಜವಿದ್ದರೂ, ನನ್ನ ವಿದ್ಯಾರ್ಥಿದಸೆಯು ಮುಗಿಯುವವರೆಗೆ ಅಂದರೆ ೧೯೦೫ನೆಯ ಇಸ್ವಿಯ ವರೆಗೆ ನಾನು ಕೈಕೊಂಡ ಚಟುವಟಿಕೆಗಳಿಗೂ ಆ ಮುಂದೆ ಕೈಕೊಂಡ ಚಟುವಟಿಕೆಗಳಿಗೂ ಮಹದಂತರವಿದೆ. ೧೮೯೫ರಿಂದ ೧೯೦೫ರ ವರೆಗಿನ ಚಟುವಟಿಕೆಗಳು ಕೇವಲ ಸ್ವಬುದ್ಧಿಪೂರ್ವಕವಾದ ಚಟು

ವಟಿಕೆಗಳಲ್ಲಿ ಅವರಲ್ಲಿ ಅನುಕರಣಭಾಗವು ಹೆಚ್ಚು. ಆಗ
ಸ್ಮರಣಶಕ್ತಿಯ ಮೇಲೆ ಭಾರ ಹೆಚ್ಚು ಸ್ಮರಣಶಕ್ತಿಯೆಂದರೆ
ಪ್ರಪಂಚದ ಲಕ್ಷಣಕೋಶ ಬರಬರುತ್ತ ಬಾಹ್ಯಪ್ರಪಂಚ
ದಿಂದ ಬಂದ ಸ್ಮೃತಿಗಳನ್ನು ಬುದ್ಧಿಯು ಮೆಲ್ಲಮೆಲ್ಲನೆ
ಒರೆಗೆ ಹಚ್ಚಿ, ತಿಕ್ಕಿನೋಡಿ, ಕೆಲವನ್ನು ಮಾತ್ರವೇ ಒಳಗೆ
ಬಿಟ್ಟು, ಮತ್ತೆ ಕೆಲವನ್ನು ಹೊರದೂಡಹತ್ತುತ್ತದೆ. ಪ್ರೌಢ
ವಿದ್ಯಾರ್ಥಿದಸೆಯೆಂದರೆ ಇಂಥ ಕಾಲ ಆದರೆ ಈ ದಸೆಯಲ್ಲಿ
ಕೂಡ ನನ್ನಲ್ಲಿ ನಿಶ್ಚಿತವಾದ ಧ್ಯೇಯಗಳಿದ್ದಿಲ್ಲ; ನಾನು ಮನೆ
ಬಿಟ್ಟು ದೂರ ಪುಣೆಮುಂಬಯಿಗಳಲ್ಲಿದ್ದಕಾರಣ ಮನೆಯ
ಸಂಬಂಧ ಕಡಿಮೆ ಕಾಲೇಜುಗಳೆಂದರೆ ಒಂದು ತರಹದ
ಗುರುಕುಲಗಳೇನೋ ಅಹುದು ಆದರೆ, ಆ ಗುರುಕುಲಗಳಲ್ಲಿ
ಗುರುಗಳಿಗೂ ಶಿಷ್ಯರಿಗೂ ವಿಶೇಷ ಸಂಬಂಧವಿಲ್ಲ ದೇವರ
ಬಾಗಿಲು ಮುಚ್ಚಿದ ದೇವಾಲಯಗಳು ಅವು; ಕಿಂಡಿಯೊಳ
ಗಿಂದ ಮಾತ್ರ ದೇವರದರ್ಶನ ಹೊರಗಿನ ಜಗತ್ತಿನ ಸಂಬಂ
ಧವಾದರೂ ಇತ್ತೆನ್ನಬೇಕೆ? ಅದೂ ಇಲ್ಲ ಮೇಲಾಗಿ,
ಅಲ್ಲಿಯ ಭಾಷೆ ಅಪರಿಚಿತ, ಜನರು ಅಪರಿಚಿತರು; ಇದೂ
ಸಾಲದುದಕ್ಕೆ, ನಾವು ಕಾಲೇಜುಗಳಲ್ಲಿದ್ದ ದಿವಸಗಳಲ್ಲಂತೂ
ಸಾರ್ವಜನಿಕ ಚಟುವಟಿಕೆಗಳ ಕಡೆಗೆ ಕಣ್ಣೆತ್ತಿ ನೋಡ
ಬಾರದೆಂದು ಎಜ್ಯುಕೇಶನ ಡಾಯರೆಕ್ಟರರ ಕಟ್ಟಪ್ಪಣೆ!
ನನ್ನ ಬಾಲ್ಯದಲ್ಲಿದ್ದಷ್ಟು ಕೂಡ ಸ್ವಾತಂತ್ರ್ಯವು ನನಗೆ
ಈ ಅವಧಿಯಲ್ಲಿ ಸಿಗಲಿಲ್ಲ ಆದಕಾರಣ, ಈ ಅವಧಿಯಲ್ಲಿ
ನನ್ನ ಜೀವನದ ಸ್ಮೃತಿಗಳ ಸಂಖ್ಯೆ ಕಡಿಮೆ.

ಆದರೆ ಮತ್ತೊಂದು ದೃಷ್ಟಿಯಿಂದ, ಈ ಕಾಲದ ಮಹ
ತ್ವವು ವಿಶೇಷವಿದೆ. ಈ ಕಾಲದಲ್ಲಿ ಬುದ್ಧಿಯು ಮೆಲ್ಲ

ಮೆಲ್ಲನೆ ಅರಳುತ್ತಿರುತ್ತದೆ. ಸ್ಮರಣಶಕ್ತಿಯು ಹಿಂಬದಿಗೆ ಹೋಗುತ್ತಿರುತ್ತದೆ ವಸ್ತುತಃ ಮನುಷ್ಯನು ಮುಕ್ಕಣ್ಣನು. ಆ ಮೂರು ಕಣ್ಣುಗಳು ಯಾವುವೆಂದರೆ (೧) ಶಾರೀರಿಕ ಕಣ್ಣು (Physical eye), (೨) ಮಾನಸಿಕ ಕಣ್ಣು (Mental eye); (೩) ಆಧ್ಯಾತ್ಮಿಕ ಕಣ್ಣು (Spiritual eye). ಹೀಗೆ ಕಣ್ಣುಗಳು ಮಾತ್ರವೇ ಮೂರಿರುತ್ತವೆಂತಲ್ಲ ಆತನು ಮುಕ್ಕಿವಿಯವನೂ ಅಹುದು, ಮೂರ್ನಾಲಿಗೆಯವನೂ ಅಹುದು. ಈ ಕಣ್ಣುಗಳಿಗೆ ಕಣ್ಣು, ಒಳಗಣ್ಣು, ಒಳಒಳಗಣ್ಣು ಎಂದು ಕರೆಯಬಹುದು. ಇದೇ ಪ್ರಕಾರ ಪ್ರತಿಯೊಂದರಲ್ಲಿ ಮೂರು ಭೇದ. ಇವುಗಳಲ್ಲಿ ಮೊದಲಿನವೆರಡು ಪ್ರಾಕೃತೇಂದ್ರಿಯ, ಮೂರನೆಯದು ಅಪ್ರಾಕೃತೇಂದ್ರಿಯ. ಇವೆಲ್ಲವುಗಳ ವಿಕಾಸವಾಗುವುದು ಅವಸ್ಥಾ ಮಾನವನು ಮುಂಚೆ ಹೊರಗಣ್ಣಿನಿಂದ ಪ್ರಪಂಚವನ್ನು ನೋಡುತ್ತಾನೆ. ಮೆಲ್ಲಮೆಲ್ಲನೆ ಒಳಗಣ್ಣು ಅರಳಹತ್ತುತ್ತದೆ. ಹೊರಗಣ್ಣಿಗೆ ಕಾಣುವ ಜಗತ್ತೇ ಬೇರೆ; ಒಳಗಣ್ಣಿಗೆ ಕಾಣುವ ಜಗತ್ತೇ ಬೇರೆ, ಒಳಒಳಗಣ್ಣಿಗೆ ಕಾಣುವ ಜಗತ್ತೇ ಬೇರೆ. ಹೊರಗಣ್ಣಿನಿಂದ ನೋಡುವುದೇ ನಿಜವಾಗಿ ಬಾಲ್ಯದಸೆ; ಒಳಗಣ್ಣಿನಿಂದ ನೋಡುವುದೇ ಪ್ರೌಢದಸೆ, ಒಳಒಳಗಣ್ಣಿನಿಂದ ನೋಡಹತ್ತುವುದೇ ಪರಿಪಕ್ವದಸೆ. ಇವು ನಿಜವಾಗಿ ವಯಸ್ಸಿಗೆ ಸಂಬಂಧಿಸಿರುವುದಿಲ್ಲ ಆದರೂ ಪ್ರೌಢವಿದ್ಯಾರ್ಥಿದಸೆಯೆಂದರೆ ಎರಡನೆಯ ತರಗತಿಯ ದಸೆಯೆಂದು ಸಾಮಾನ್ಯತಃ ಹೇಳಬಹುದು. ಒಂದು ಕಣ್ಣು ತೆರೆದಾಗ ಮಿಕ್ಕೆರಡು ಕಣ್ಣುಗಳು ಬಹಶಃ ಮುಚ್ಚಿರುತ್ತವೆ. ಒಳಒಳ

ಆಗಿನ ಕಾಲದ ಹುಡುಗರ ಅಂತಿಮ ಧ್ಯೇಯ! ಅಲ್ಲದೆ 'ಹಾಗ್' ಇವರು ಕೊಟ್ಟ ಸರ್ಟಿಫಿಕೇಟಿನಲ್ಲಿ ನಮ್ಮ ತಂದೆ ಯವರನ್ನು ವರ್ಣಿಸಿದಂತೆ, (ಪು. ೧೬ ನೋಡಿರಿ) ನನ್ನ ಸ್ವಭಾವವೂ 'ಇದ್ದದ್ದಕ್ಕಿಂತ ಕಡಿಮೆ ತಿಳಿಯುವುದು.' ಎನೆಯ ನಂಬರು ಬಂದಿದ್ದರೂ ಪಾಸಾಗುತ್ತೇನೋ ಇಲ್ಲೋ ಎಂದು ಆಗ ಅಂಜಿಕೆ ನನಗೆ. ಆದಕಾರಣ, ನಾನು ದಿನಾಲು ಲಾಲಗುಡಿಯ ಹತ್ತಿರವೇ ಒಂದು ತೆಗ್ಗಿನಲ್ಲಿರುವ ವೆಂಕಟರಮಣದೇವರಿಗೆ ಏಕಾಂತದಲ್ಲಿ (ಬಹಿರಂಗವಾಗಿ ಬೇಡಿಕೊಳ್ಳಲಿಕ್ಕೆ ನಾಚಿಕೆ) ನನ್ನನ್ನು ಪಾಸುಮಾಡೆಂದು ಬೇಡಿಕೊಳ್ಳುತ್ತಿದ್ದೆನು ಇಂಥ ಸಮಯದಲ್ಲಿ, ಮನುಷ್ಯನಿಗೆ ದೇವರಮೇಲೆ ಭಕ್ತಿ ಹೆಚ್ಚಿಗೆ ಹುಟ್ಟುತ್ತದೆ ಕನಿಷ್ಠ, ನನಗಂತೂ ಹಾಗೆ ಹುಟ್ಟಿತು. ನಾನು ಆಗಿನಿಂದಲೂ ಏಕಾಂತಪ್ರಿಯನು. ಭಕ್ತಿವಿಶ್ವಾಸಗಳು ಬೆಳೆಯಲಿಕ್ಕೆ ಏಕಾಂತವು ಅವಶ್ಯ.

ಅಜ್ಞಾತವಾಸದಲ್ಲಿ ಆತ್ಮಗತವಿಚಾರ (Reflections) ಗಳಿಗೆ ಅವಕಾಶ ಹೆಚ್ಚು. ನವಿಲುಗುಂದದಲ್ಲಿಯ ನನ್ನ ಒಂದು ವರುಷದ (೧೮೯೮) ಅಜ್ಞಾತವಾಸವು ನನ್ನ ಮುಂದಿನ ಏಕಾಂತಜೀವನದ ಬೀಜವು. ಹಾಯಸ್ಕೂಲಿ ನಲ್ಲಿದ್ದಾಗ ಕೆಲವು ಚಳವಳಿಗಳಲ್ಲಿ ಸೇರಿ ಏನೇನೋ ತಲೆ ಯಲ್ಲಿ ತುಂಬಿಕೊಂಡು ಬಂದಿದ್ದೆನಾದ್ದರಿಂದ, ಮುಂದೆ ಹೀಗೆ ಮಾಡಬೇಕು, ಹಾಗೆ ಮಾಡಬೇಕೆಂಬ ಬಗ್ಗೆ ನಾನು ತುದಿಮೊದಲಿಲ್ಲದ ವಿಚಾರಗಳಲ್ಲಿ ಮಗ್ನನಾಗುತ್ತಿದ್ದೆ. ಅವು ಕ್ಷಣಾರ್ಧದಲ್ಲಿ ಹಾರಿಯೂ ಹೋಗುತ್ತಿದ್ದವು. ಆದರೆ, ಈ ಏಕಾಂತವಾಸದಲ್ಲಿ ನನಗೆ ಬಿದ್ದ ವಿಚಾರಮಗ್ನನಾಗುವ

ಚಟವು ಮಾತ್ರ ಮುಂದೆ ಬೆಳೆಯುತ್ತಲೇ ಹೋಯಿತು. ಈಗಲೂ ನನಗೆ ಹಾಗೆ ಮಾಡುವುದರಲ್ಲಿಯೇ ಆನಂದ ಹೆಚ್ಚು. ನಾನು ರಾಷ್ಟ್ರೀಯ ಶಾಲೆಯನ್ನು ತೆಗೆದಾಗ ವಿಜಾಪುರದ ಸರಕಾರೀವಕೀಲರೂ ನನ್ನ ತಮ್ಮ ಲಕ್ಷ್ಮಣನ ಮಾವಂದಿರೂ ಆದ ಸವಣೂರ ಶೇಷಗಿರಿರಾಯರು ಮೇಲಿಂದ ಮೇಲೆ ನಮ್ಮ ಮನೆಗೆ ಬರುತ್ತಿದ್ದರು. ಅವರು ನನ್ನ ಈ ಚಟಕ್ಕೆ ಬೇಸತ್ತು "ವೆಂಕಣ್ಣನಲ್ಲಿ ವಿಚಾರಮಾಡುತ್ತ ಕುಳಿತುಕೊಳ್ಳುವ ಹುಚ್ಚು ಎಲ್ಲಿಯವರೆಗೆ ಮುಟ್ಟಿರುತ್ತದೆಂದರೆ, ಆತನಿಗೆ ವಿಚಾರಕ್ಕೆ ಏನೂ ವಿಷಯ ಸಿಕ್ಕದಿದ್ದರೆ, ಕೊನೆಗೆ, ಗೋಳುಗುಮ್ಮಟವು ಘಕ್ಕನೆ ಬಿದ್ದುಹೋದರೆ ಮುಂದೆ ಹಿಂದುಸ್ಥಾನದ ಗತಿಯೇನು, ಎಂಬ ಬಗ್ಗೆ ತಾಸುಗಟ್ಲೆ ವಿಚಾರಮಾಡುತ್ತ ಕುಳಿತುಕೊಳ್ಳುವನು" ಎಂಬುದಾಗಿ ನನಗೆ ಚೇಷ್ಟೆಮಾಡುತ್ತಿದ್ದರು.

ಗಲಗಲಿಯ ಇಸ್ವಿಯ ಶಾಂತವಾತಾವರಣದಲ್ಲಿ, ನನಗೆ ನಮ್ಮ ತಂದೆಯವರು ಸಂಗ್ರಹಿಸಿದ ಮಹಾಭಾರತಾದಿ ಗ್ರಂಥಗಳನ್ನೂ ನೀತಿಮೀಮಾಂಸ, ಧರ್ಮಮೀಮಾಂಸೆ ಮುಂತಾದ ಮರಾಠೀ ಗ್ರಂಥಗಳನ್ನೂ ಓದುವ ಸುಸಂಧಿ ದೊರೆಯಿತು. ಹೊತ್ತು ಹೋಗುತ್ತಿದ್ದಿಲ್ಲವಾದುದರಿಂದ ಅವನ್ನು ಓದುತ್ತಿದ್ದೆ. ಅವುಗಳ ವಾಚನವು ವಿಚಾರಕ್ಕೆ ಪುಟ ಕೊಡುತ್ತಿತ್ತು. ಧರ್ಮಮೀಮಾಂಸೆಯನ್ನೋದುವಾಗ ತಲೆಯಲ್ಲಿ ಕೆಲವು ಶಂಕೆಗಳು ಹುಟ್ಟಿದವು. ಆ ಬಗ್ಗೆ ಆ ಗ್ರಂಥದ ಮೂಲಕರ್ತರಾದ ಮ್ಯಾಕ್ಸಮ್ಯುಲರ ಇವರಿಗೆ ಪತ್ರಬರೆದು ಕೇಳಬೇಕೆಂದು ಫೆಬ್ರುವರಿ ತಿಂಗಳಿನಲ್ಲಿ ನನ್ನ ಮನಸ್ಸಿನಲ್ಲಿ ಬಂದಿತು. ಓದುವುದರಲ್ಲಿ ಆಗ ನನಗೆ ಸಂಗಡಿ

ಗರು ಗುತ್ತಲ ರಾಮಾಚಾರ್ಯರು ಅವರು ಅದೇ ನ್ಯಾಯ ಸಲ್ ಪರೀಕ್ಷೆಗಾಗಿ ಉಮೇದವಾರರಾಗಿ ಇಲ್ಲಿಗೆ ಬಂದಿದ್ದರು ನಮ್ಮ ಮನೆಯಲ್ಲಿಯೇ ಊಟಮಾಡಿಕೊಂಡು ಇದ್ದರು. ಆಗಿನಿಂದಲೂ ಅವರಿಗೆ ಮಧ್ವಮತದಲ್ಲಿ ನಿಷ್ಠೆ ಬಹಳ ಅವರ ಸಹವಾಸದಿಂದ ನನಗೂ ವೇದಾಂತ ಗ್ರಂಥಗಳನ್ನೋದುವ ಅಭ್ಯಾಸ ಬಿತ್ತು ನಾವಿಬ್ಬರೂ ಪುನಃ ಒಂದೆರಡು ತಿಂಗಳು ಆ ಧರ್ಮನಿರೂಪಣೆ ಪುಸ್ತಕವನ್ನೋದಿ ಶಂಕೆಗಳನ್ನು ತೆಗೆದೆವು ಮತ್ತು ನಾನು ೨೦-೭-೧೮೯೯ನೆಯ ಇಸ್ವಿಯ ಹೊಸ ಬಗ್ಗೆ ನಾನೊಂದು ಪತ್ರವನ್ನು ಮ್ಯಾಕ್ಸಮ್ಯೂಲರರಿಗೆ ಬರೆದನು ಅವರ ವಿಳಾಸ ಗೊತ್ತಿರಲಿಲ್ಲ ಲಂಡನಕ್ಕೆ ಬರೆದ ಆ ಪತ್ರ ಅವರಿಗೆ ಮುಟ್ಟಿತೋ ಇಲ್ಲವೋ ತಿಳಿಯಲಿಲ್ಲ ಮುಂದೆ ೧೯೦೦ ನೆಯ ಇಸ್ವಿಯಲ್ಲಿ ಅವರು ಮೃತರಾದರೆಂದು ಕೇಳಿದೆನು

ಈ ವಾಚನವು ನಡೆದಾಗ ಆಕಸ್ಮಿಕವಾಗಿ ಒಂದು ಸಂಗತಿ ಸಂಭವಿಸಿತು. ಅದು ಮುಂದೆ ನಾನು ಕನ್ನಡ ಗ್ರಂಥಕರ್ತನಾಗುವುದಕ್ಕೆ ಬೀಜವಾಯಿತು. ಅದೇನೆಂದರೆ, ದಾಭೋಳಕರ ಎಂಬವರು ಪ್ರಸಿದ್ಧಪಡಿಸಿದ ನೀತಿನಿರೂಪಣೆ, ಧರ್ಮನಿರೂಪಣೆ ಮುಂತಾದ ಆ ಮರಾಠೀ ಭಾಷಾಂತರಗಳ ಬಗ್ಗೆ ನಾನು ಹುಚ್ಚಪಚ್ಚ ಟೀಕೆಯನ್ನು ಮಾಡುತ್ತಿದ್ದೆನು. ನನ್ನ ಹಿರಿಯರು ಅದನ್ನು ಕೇಳಿ "ಹೀಗೆ ಟೀಕೆಮಾಡುವುದು ಸುಲಭ, ಕನ್ನಡದಲ್ಲಿ ಭಾಷಾಂತರ ಮಾಡಿ ನೋಡು, ಅಂದರೆ ನಿನ್ನ ಬಣ್ಣ ತಿಳಿಯುತ್ತದೆ, ವ್ಯರ್ಥವಾಗಿ ಹರಟಹೊಡೆಯುವುದಕ್ಕಿಂತ ನೀನು ಹೀಗೆ

ಏಕೆ ಮಾಡಬಾರದು ?" ಎಂದು ಸಹಜವಾಗಿ ಆಡಿದರು. ಏಕೋ ಏನೋ ಅವರಿಂದಲೇ ನನಗೆ ಪ್ರೇರಣೆ ದೊರೆತು, ಅದೇ ದಿವಸ ಅಂದರೆ ೧೧-೨-೧೯೩೮ನೆಯ ಇಸ್ವಿಯ ದಿವಸ, ಒಮ್ಮೆಲೆ ನಾನು ಪ್ರೊ. ಭಾಸು ಇವರು ಬರೆದ ನೀತಿಮೀಮಾಂಸೆಯೆಂಬ ಗ್ರಂಥವನ್ನು ಕನ್ನಡಿಸಲಿಕ್ಕೆ ಪ್ರಾರಂಭಿಸಿಯೇ ಬಿಟ್ಟೆನು. ನನ್ನ ಆಗಿನ ಕನ್ನಡದ ಜ್ಞಾನ ವೆಂದರೆ, ಅದರ ಹಿಂದೆ ೭-೮ ವರುಷಗಳ ಕೆಳಗೆ ಕನ್ನಡ ನಾಲ್ಕನೆಯ ಇಯತ್ತೆಯವರೆಗೆ ಕಲಿತು ಮರೆತುಬಿಟ್ಟಿದ್ದು ಅಷ್ಟೇ ಭಂಡವಲು ಹಾಯಸ್ಕೂಲಿನ ಮೂರು ಇಯತ್ತೆ ಗಳಿಗೂ ಸಾಕಾಯಿತು. ಮುಂದೆ, ಕನ್ನಡಕ್ಕೂ ನನಗೂ ಸಂಬಂಧವೇ ಕಡಿದುಹೋಗಿತ್ತು. ಆದಕಾರಣ, ಇದ್ದ ಅಲ್ಪಸ್ವಲ್ಪ ಭಂಡವಲೂ ಕರಗಿಹೋಗಿತ್ತು. ಇಂಥ ಸ್ಥಿತಿ ಯಲ್ಲಿ ನಾನು ಗ್ರೀನನಂಥ ಮಹಾ ತತ್ವಜ್ಞಾನಿಯ ಗ್ರಂಥದ ಆಧಾರದಿಂದ ಪ್ರೊ. ಭಾಸು ಇವರಂಥ ವಿದ್ವಾಂಸರು ಬರೆದ ಆ ನೀತಿಮೀಮಾಂಸೆಯನ್ನು ಕನ್ನಡಿಸಲಿಕ್ಕೆ ಹೊರ ಟಿದ್ದು ನನ್ನ ಯೋಗ್ಯತೆಯನ್ನು ಲಕ್ಷ್ಯಕ್ಕೆ ತಾರದ ಅದಕ್ಕೆ ಕೈಹಾಕಿದೆ. ಅಂತೂ ಇಂತೂ ಮಾಡಿ ಅದರ ಅರ್ಥ ಭಾಷಾಂತರ ಆ ವರ್ಷ ಮುಗಿಸಿದೆ. ಅದರೊಳಗಿನ ಒಂದು ಸ್ವಲ್ಪ ಭಾಷಾಂತರವನ್ನು ಆಗಿನ ನನ್ನ ಕನ್ನಡದ ಅಗಾಧ ವಾದ ಪಾಂಡಿತ್ಯದ ಪ್ರದರ್ಶನಾರ್ಥವಾಗಿಯೂ ವಾಚಕರ ವಿನೋದಾರ್ಥವಾಗಿಯೂ ಇದರಡಿ ಕೊಡುತ್ತೇನೆ.

"ಶಾಸ್ತಾ ಮತ್ತು ಶಾಸನೀಯವೆಂಬ ಭೇದವು ಯೆಲ್ಲಿ ವುತ್ಪಂನವಾಗಿಲ್ಲೊ ಅಥವಾ ರಾಜಾ ಮತ್ತು ಪ್ರಜೆಯೆಂದು ಯೆಲ್ಲಿ ಭೇದವಾಗಿಲ್ಲೊ, ಮತ್ತು ಅದರಿಂದಲೇ ಅಲ್ಲೆ

ಯಾವ ಕಾಯದೆಯು ಇಲ್ಲೋ, ಅಲ್ಲಿ "ಅನ್ಯಾಯ" ವಾಗುವದು ಅಶಕ್ಯ ಮತ್ತು ಅಸಂಭವನೀಯವಿರುತ್ತದೆ. ಯಾಕಂದರೆ, ಕಾಯದೆಪ್ರಕಾರಾ ನ ಡೆ ಯ ದಿ ರು ವ ದೆ ಅನ್ಯಾಯವೆಂದು ಹೇಳಿರುತ್ತದೆ. ಇಂಸು ಯೆಲ್ಲಿ ಕಾಯ ದೇನೇ ಇಲ್ಲಾ ಅಲ್ಲಿ ಕಾಯದೆಯ ಪ್ರಕಾರ ನಡೆಯದಿರುವದು ಅಂದರ ಅನ್ಯಾಯವು ಯೆಲ್ಲಿಂದ ಬರುವದು .ಸಾರಾಂಶ, ನ್ಯಾಯ ಮತ್ತು ಅನ್ಯಾಯವೆಂಬ ತರ್ಕಗಳು ಮನುಷ್ಯನ ಮನಸ್ಸಿನಲ್ಲಿ ಬರುವದಕ್ಕಿಂತ ಮೊದಲು ಮನುಷ್ಯನಿಗೆ ಠರಾವಿನಂತೆ ನಡೆಯುವ ಸಂಸ್ಥೆಯು ಆಗಿರಲಿಕ್ಕೆ ಬೇಕು. ಮತ್ತು ಠರಾವಿನಂತೆ ವರ್ತಿಸದಿದ್ದರ, ಯಾವ ಸುಖವಾಗು ತ್ತದೊ ಅದರಕ್ಕಿಂತ ಹೆಚ್ಚು ದುಃಖವಾಗುವಂಥ ಶಿಕ್ಷೆಯನ್ನು ವಿಧಿಸುವದಕ್ಕೆ ರಾಜನಿಗ ಅಧಿಕಾರವಿರಲಿಕ್ಕೆ ಬೇಕು "

ಸಾಕು; ಇದರ ಅರ್ಥವನ್ನು ಹೇಳಲಕ್ಕೆ ಸ್ವರ್ಗ ಲೋಕದಿಂದ ಸಾಕ್ಷಾತ್ ಬ್ರಹಸ್ಪತ್ಯಾಚಾರ್ಯರೇ ಇಳಿದು ಬರಬೇಕಲ್ಲವೆ ? ಕನ್ನಡ ಸಾಹಿತಿಗಳಿಗೆ ಈ ನನ್ನ ಪಾಂಡಿ ತ್ಯದ ಗುಟ್ಟು ಇಲ್ಲಿಯವರೆಗೆ ಗೊತ್ತಾಗಲಿಲ್ಲವೆಂದು ನೆಟ್ಟಗೆ. ಇಲ್ಲದಿದ್ದರ, ನನಗೆ ೧೯೩೩ನೆಯ ಇಸ್ವಿಯಲ್ಲಿ, ಮೈಸೂರಿ ನಲ್ಲಿ ದೊರೆತ ಅಖಿಲಕರ್ನಾಟಕದ ಸಾಹಿತ್ಯಸಮ್ಮೇಲನದ ಅಧ್ಯಕ್ಷ ಪದವಿಯ ಮಾನಕ್ಕೆ ಅವರು ಕಲ್ಲುಹಾಕದೆ ಇರು ತ್ತಿರಲಿಲ್ಲ. ಆದರ, ಕನ್ನಡ ಮರಾಠೀ ಸಂಸ್ಕೃತ ಭಾಷೆ ಗಳ ಏಕೀಕರಣದ ಮೂಲಪುರುಷನೆಂದು ಮತ್ತೆ ಕೆಲವರು ನನ್ನನ್ನು ಹಾಡಿಹರಸುತ್ತಿದ್ದರೆಂಬುದು ಆ ಸಾಹಿತಿಗಳಿಗೇನು ಗೊತ್ತು ? ಇರಲಿ. ನಮ್ಮ ತಂದೆಯವರಿಗೆ ಆಗ ಕನ್ನಡದ ಬಗ್ಗೆ ಬಹಳ ಅಭಿಮಾನವಿತ್ತೆಂದಲ್ಲ. ಆದರೂ ಆಗಿನ

ಅವರ ಸಹಜನುಡಿಯು ನನಗೆ ಪ್ರೇರಕಮಂತ್ರವಾದುದೇನೂ ಸುಳ್ಳಲ್ಲ.

ನವಲಗುಂದದಲ್ಲಿದ್ದಾಗ ನನಗೆ ಚಿಂತಾಮಣಿ ಪೇಟಕರ ಎಂಬೊಬ್ಬ ವಿದ್ಯಾರ್ಥಿಯ ಪರಿಚಯವಾಯಿತು. ಆತನು ಪುಣೆಯಲ್ಲಿ ಕಲಿತವನು. ಸಂಸ್ಕೃತದಲ್ಲಿ ಆತನ ಪಾಂಡಿತ್ಯ ನೋಡಿ ಬೆರಗಾದೆನು. ಆದರೆ ಸಂಸ್ಕೃತದಲ್ಲಿಯೇ ಆ ವರ್ಷದ ಮ್ಯಾಟ್ರಿಕ್ ಪರೀಕ್ಷೆ ನಾಪಾಸಾಗಿದ್ದನು. ಅದಕ್ಕೆ ಕಾರಣವನ್ನು ಕೇಳಲಾಗಿ, ಸಂಸ್ಕೃತ ಪೇಪರ ಬರೆದು ಅದನ್ನು ಮುಗಿಸಿಕೊಡುವ ಕಾಲಕ್ಕೆ ಆಕಸ್ಮಿಕವಾಗಿ ಮಸಿ ದೌತಿ ಅದರ ಮೇಲೆ ಉರುಳಿತೆಂದೂ ಅದನ್ನು ಸುಪರ ವಾಯಿಝರರ ಲಕ್ಷ್ಯಕ್ಕೆ ತಂದರೂ ದಾದುಹತ್ತಲಿಲ್ಲವೆಂದೂ ಆತನು ಹೇಳಿದನು. ಮರುವರುಷ ಪ್ರೀವಿಯಸ್ ಪರೀಕ್ಷೆಗೆ ಕುಳಿತಾಗ ಹೀಗೆಯೇ ಮತ್ತೊಂದು ಆಕಸ್ಮಿಕ ಕಾರಣಕ್ಕೋಸ್ಕರ ನಾನು ನಾಪಾಸಾದೆನು. ಅದನ್ನೂ ಇಲ್ಲಿಯೇ ಹೇಳಿಬಿಡುತ್ತೇನೆ. ೧೮೯೭ನೆಯ ಇಸ್ವಿಯ ಆಕ್ಟೋಬರ ನವ್ಹಂಬರ ಸುಮಾರಕ್ಕೆ ನಾನು ಮುಂಬಯಿಗೆ ಪ್ರೀವಿಯಸ್ ಪರೀಕ್ಷೆಗೆ ಹೋಗಿದ್ದೆ. ಮುಂಬಯಿಗೆ ನಾನು ಹೋದದ್ದು ಅದೇ ಮೊದಲನೆಯ ಸಲ. ಮುಂಬಯಿಯಲ್ಲಿ ಕಳ್ಳರು ಬಹಳವೆಂದು ನಮಗೆ ಅಂಜಿಕೆ. ಆದಕಾರಣ, ಯಾವತ್ತು ಹಣವನ್ನು ಯಾವಾಗಲೂ ಜೇಬಿನಲ್ಲಿಯೇ ಇಟ್ಟುಕೊಂಡಿರುತ್ತಿದ್ದೆವು. ಗಣಿತದ ಪರೀಕ್ಷೆಯ ದಿವಸ. ಪಾರ್ಶೀ ಕೋಟಿನ ಮೇಲ್ಗಿಸೆಯಲ್ಲಿ ನನ್ನ ಹಣದ ನೋಟುಗಳ ಪುಡಿಕೆ. ನನ್ನ ವಾಚೂ ಅಲ್ಲೇ ಇತ್ತು. ಪರೀಕ್ಷೆಗೆ ಕುಳಿತುಕೊಂಡೆ. ವಾಚನ್ನು ತೆಗೆದು ಮೇಜಿನಮೇಲೆ ಇಟ್ಟುಕೊಂಡೆ; ಲೆಕ್ಕ

ಬಿಡಿಸಲಿಕ್ಕೆ ಪ್ರಾರಂಭಮಾಡಿದೆ. ಸ್ವಲ್ಪ ಹೊತ್ತಿನ ಮೇಲೆ, ಸಹಜವಾಗಿ ಕಿಸೆಯಲ್ಲಿ ಕೈಹೋಯಿತು. ನೋಟುಗಳ ನೆನಪಾಯಿತು. ನೋಟುಗಳ ಆ ಪುಡಿಕೆ ಅಲ್ಲಿ ಇರಲಿಲ್ಲ! ಒಮ್ಮೆಲೆ ಎದೆ ಧಸಲ್ಲೆಂದಿತು. ನನ್ನ ಅಂಗಿಗಳಿಗೆ ಅನೇಕಾನೇಕ ಕಿಸೆಗಳು ! ಎಲ್ಲವನ್ನೂ ಹುಡುಕಿ ಹುಡುಕಿ ನೋಡಿದೆ. ಅವು ಇದ್ದಿಲ್ಲ. ಮರೆತು ಮನೆಯಲ್ಲಿ ಎಲ್ಲಿಯಾದರೂ ಬಿಟ್ಟೆನೋ ಎಂದುಕೊಂಡೆ. ಮನಸ್ಸಿನಲ್ಲಿ ಸಮಾಧಾನವಿಲ್ಲ. ಮುಂದೆ ಪೇಪರಿನ ಕಡೆಗೆ ಲಕ್ಷ್ಯಹೋಗಲಿಲ್ಲ ಅಂತೂ ಇಂತೂ ಬಿಡಿಸಿ, ಗಂಟೆಹೊಡೆದೊಡನೆ ಪೇಪರು ಸುಪರವಾಯಿಝರರ ಕೈಯಲ್ಲಿ ಒಗೆದವನೆ, ಯಾರಿಗೂ ಹೇಳದೆ ಕೇಳದೆ, ಮನೆಗೆ ಓಡಿದೆ; ಅಲ್ಲಿ ಹುಡುಕಿದೆ ಸಂಬರ ಮನೆಗೆ ಜಗಿತಕೊಟ್ಟೆ, ಅಲ್ಲಿಯೂ ಇರಲಿಲ್ಲ. ರಾತ್ರಿಯಾಯಿತು. ಗೆಳೆಯರ ಮುಂದೆ ಹೇಳಲಿಕ್ಕೆ ನಾಚಿಕೆ. ಮುಂದೇನು ಮಾಡಬೇಕೆಂದು ಹಳಹಳಿ. ಪೆಂಡಾಲಿನ ಕಡೆಗೆ ಟ್ರ್ಯಾಮಿನಲ್ಲಿ ಧಾವಿಸಿದೆ. ಪೆಂಡಾಲಿನ ದಾರಿ ಸಿಗಲಿಲ್ಲ. ಹ್ಯಾಗೂ ಹೀಗೂ ಪೆಂಡಾಲಿಗೆ ಬಂದೆ. ಅಲ್ಲಿ ಏನಿದೆ? ಕತ್ತಲು ! ಹೊರಗೆ ಸಿಪಾಯರ ಪಹರೆ ! ಒಳಗೆ ಹೋಗುವಂತಿರಲಿಲ್ಲ. ಮರಳಿ ಟ್ರ್ಯಾಮುಹತ್ತಿ ಮನೆಗೆ ಬಂದುಬಿಟ್ಟೆ. ಮರುದಿವಸ ಎಲ್ಲರಿಗಿಂತ ಮುಂಚೆ ಪೆಂಡಾಲಿಗೆ ಓಡಿದೆ. ಆದರೆ, ಮುಂದೆ ನನ್ನನ್ನು ಒಳಗೆ ಬಿಡುವರಾರು ? ಮನನಲ್ಲಿ ಎದೆಗುದಿ ನಿಲ್ಲಲೊಲ್ಲದು. ಆದರೂ ಪೆಂಡಾಲಿನಲ್ಲಿಯೇ ಎಲ್ಲಿಯಾದರೂ ಬಿದ್ದಿರಬಹುದೋ ಏನೋ ಎಂಬ ಆಶೆಯೂ ತಪ್ಪಲೊಲ್ಲದು. ಹೊಕ್ಕವನೇ ನನ್ನ ಜಾಗೆಯ ಹತ್ತಿರ ಹುಡುಕಿದೆ. ನನ್ನ ಮೇಜಿನ ಬುಡಕ್ಕೆ ಕಾಗದದ ಚೂರು

ಕಾಣಿಸಿತು ! ಸರಕ್ಕನೆ ಎತ್ತಿಕೊಂಡೆ. ನನ್ನ ನೋಟುಗಳ ಪುಡಿಕೆಯಾಯಿತು ಅದು ! ಪರೀಕ್ಷೆ ಮುಗಿದ ಬಳಿಕ ಶಿಪಾಯಿರು ಬಿದ್ದ ಕಾಗದದ ಚೂರುಗಳನ್ನೆಲ್ಲಾ ಕಲೆಹಾಕಿ ಒಗೆದುಬಿಡುವ ವಹಿವಾಟು ನನ್ನ ನೋಟುಗಳು ಹೇಗೆ ಉಳಿದವೋ ದೇವರೇ ಬಲ್ಲ ! ಗೀತೆಯಲ್ಲಿ ಹೇಳಿದ ಒಂದು ಕಾರ್ಯಕ್ಕಿರುವ ಪಂಚಕಾರಣಗಳಲ್ಲಿಯ ಅದೃಷ್ಟವೆಂದರೆ ಇದೇ ಅಲ್ಲವೆ ? ಆ ವರ್ಷ, ಗಣಿತದಲ್ಲಿ ೩-೪ ಮಾರ್ಕ್ಸ ಕಡಿಮೆ ಬಿದ್ದು ನಾಪಾಸಾದೆನು ಅದೂ ನನ್ನ ಅದೃಷ್ಟ !

ನಮ್ಮ ತಂದೆಯವರು ಕರ್ಮಠರಲ್ಲ, ಆದರೆ ಸುಧಾರಕರೂ ಅಲ್ಲ ಗಿಲಗಿಲರಲ್ಲಿ ಸಾಠೆ ಎಂಬೊಬ್ಬ ಸುಧಾರಕ ಮಾಮಲೇದಾರರು ನವಲಗುಂದಕ್ಕೆ ಬರುವವರಿದ್ದರು ಭಿಡೆ ಎಂಬವರು ಹೋಗುವವರಿದ್ದರು. ಸಾಠೆ ಎಂಬವರು ಬಂದ ಬಳಿಕ ಅವರೊಡನೆ ಅನ್ನಾದಿ ವ್ಯವಹಾರ ಮಾಡುವ ಪ್ರಸಂಗ ಬರಬಹುದೆಂದು ತಿಳಿದು, ಒಂದೆರಡು ತಿಂಗಳು ಮುಂಚಿತವಾಗಿ ನಮ್ಮ ತಂದೆಯವರು ಪರಾನ್ನವನ್ನು ಬಿಟ್ಟುಬಿಟ್ಟರು ಭಿಡೆಯವರಿಗೆ ಔತಣಗಳ ಮೇಲೆ ಔತಣಗಳಾದವು. ಅವುಗಳಿಗೆಲ್ಲ ನಿರುದ್ಯೋಗಿಯಾಗಿ ಕುಳಿತುಕೊಂಡಿರುವ ನಾನೇ ನನ್ನ ತಂದೆಯವರ ಪ್ರತಿನಿಧಿಯು !

ನಡುನಡುವೆ ನಮ್ಮ ತಂದೆಯವರು ನರಗುಂದಕ್ಕೆ ಮಹಾಲಕರಿಗಳಾಗಿ ಹೋಗುತ್ತಿದ್ದರು. ಅವರು ಮ್ಯೂರ ಎಂಬೊಬ್ಬ ಕಲೆಕ್ಟರ ಸಾಹೇಬನ ಒಂದು ಕಥೆಯನ್ನು ಒಮ್ಮೆ ನನಗೆ ಹೇಳಿದರು. ಅದೇನೆಂದರೆ, ಆ ಮ್ಯೂರ ಸಾಹೇಬನು ದಡ್ಡನಿದ್ದರೂ ಕಾಲಕ್ಕೆ ಸರಿಯಾಗಿ ಕೆಲಸಮಾಡುವುದರಲ್ಲಿ ವಿಲಕ್ಷಣ ದಕ್ಷನಂತೆ. ಒಮ್ಮೆ ನರಗುಂದಕ್ಕೆ ಇಂತಿಷ್ಟು ವೇಳೆಗೆ

ತಪಾಸಿಗೆ ಬರುವೆನೆಂದು ಹೇಳಿಕಳುಹಿಸಿದನು. ನನ್ನ ತಂದೆ ಯವರು ಹಾದೀ ಕಾಯುತ್ತ ಕುಳಿತರು. ಆ ದಿವಸ ಅತಿ ಶಯ ಮಳೆ ಆಗಿ ಬೆಣ್ಣೀಹಳ್ಳವು ತುಂಬಿಬಂದಿತು. ಮ್ಯೂರ ಸಾಹೇಬರ ಸ್ವಾರಿಯು ಹಳ್ಳದ ದಡಕ್ಕೆ ಬಂದಿತು. ನೋಡು ತ್ತಾರೆ, ಹಳ್ಳ ಭರಪೂರ ತುಂಬಿ ಭರದಿಂಡೆ ಹರಿಯುತ್ತಿದೆ. ಸಿಂಗಡಿಕೆಯವರಿಗೆ ಸಿಂಗಡಿಕೆ ಹಾಕಲಿಕ್ಕೆ ಹೇಳಿದರು. ತಾವು ಅದರ ಮೇಲೆ ಕುಳಿತುಕೊಂಡು ಹಳ್ಳವನ್ನು ದಾಟಿ ಒದ್ದೆಬಟ್ಟೆಯಿಂದ ಕಚೇರಿಗೆ ಬಂದರು ! ಆದರೆ ಚಮತ್ಕಾರ ವೇನೆಂದರೆ, ಧಾವಿಸಿಬರುವಾಗ ಹೇಳಿದ ವೇಳೆಗೆ ಕೆಲವು ನಿಮಿಷ ಮುಂಚಿತವಾಗಿಯೇ ಬಂದುಬಿಟ್ಟಿದ್ದರಿಂದ, ಸ್ವಾರಿಯು ಕಚೇರಿಯ ಒಳಗೆ ಹೋಗದೆ ಹೊರಗೆ ನಿಂತು ಬಿಟ್ಟಿತು! ಇಂಥವು ಅತಿರೇಕ ಉದಾಹರಣೆಗಳಾದರೂ ಅನು ಕರಣೀಯವಾದವುಗಳಲ್ಲವೆ ?

ತಮ್ಮ ತಂದೆಯವರು ತಿರುಪತಿಯ ಮಧ್ವಸಿದ್ಧಾಂತೋ ನ್ನಾಹಿನೀ ಸಭೆಯ ಸದಸ್ಯರು. ಅವರು ಆ ಸಂಸ್ಥೆಯ ಸಲು ವಾಗಿ ವರ್ಗಣಿ ಕೂಡಿಸಿ ಕಳುಹಿಸುತ್ತಿದ್ದರು. ಅದಕ್ಕಿಂತ ಹೆಚ್ಚಿನ ಕೆಲಸವನ್ನೇನೂ ಮಾಡುತ್ತಿರಲಿಲ್ಲ. ಉತ್ತರಾದಿ ಮಠದ ಶ್ರೀಗಳವರ ಪ್ರೇರಣೆಯಿಂದ ಭೀಮರಾವ ಕಮ ಲಾಪುರ ಇವರು ಧಾರವಾಡದಲ್ಲಿ ಮಧ್ವಸಿದ್ಧಾಂತೋ ತ್ತೇಜಕ ಸಭೆಯನ್ನು ಸ್ಥಾಪಿಸಿದ್ದರು. ಅದರ ಸಲುವಾಗಿ, ಅಸಿಸ್ಟಂಟ ಕಮಿಶನರಾಗಿದ್ದ ಕಮಲಾಪುರ ಶ್ರೀನಿವಾಸ ರಾಯರು ನವಲಗುಂದಕ್ಕೆ ಬಂದಿದ್ದರು. ನಮ್ಮ ತಂದೆ ಯವರಿಗೆ ಆಜೀವಸಭಾಸದರಾಗುವುದಕ್ಕೆ ಕೇಳಿದರು. ಹೀಗೆ ಎರಡು ಸಂಸ್ಥೆಗಳಾಗುವುದು ಉಚಿತವಲ್ಲವೆಂದು ನಮ್ಮ ತಂದೆ

ಯವರು ಸ್ಪಷ್ಟವಾಗಿ ಸೂಚಿಸಿದರು. ಆದರೆ, ಅವರ ದಾಕ್ಷಿ ಣ್ಯಕ್ಕೆ ಒಳಪಟ್ಟು ಧಾರವಾಡದ ಸಂಸ್ಥೆಗೆ ಆಜೀವ ಸಭಾ ಸದರಾದರೂ ಅವರ ಒಲವು ತಿರುಪತಿಯ ಸಭೆಯ ಕಡೆಗೇ ಇತ್ತು. ಆದಕಾರಣ, ಮುಂದೆ ಸಹ, ವರ್ಗಣಿಯನ್ನು ಕೂಡಿಸಿ, ತಿರುಪತಿಯ ಸಭೆಗೇನೇ ಕಳಿಸುತ್ತಿದರು ಈ ಸುಮಾರಕ್ಕೆ ಶ್ರೀಗಳವರ ಸ್ವಾರಿಯು ನವಿಲು ಗುಂದಕ್ಕೆ ಬಂದಿತು. ಮಾಮಲೇದಾರರು ಮಾಧ್ವರಲ್ಲದ್ದ ರಿಂದ ನಮ್ಮಲ್ಲಿಯೆ ಮೊದಲನೆಯ ಭಿಕ್ಷೆ ಆಯಿತು. ಮುಂದೆ, ಕೆಲವು ದಿನಗಳ ಮೇಲೆ ನಮ್ಮ ತಂದೆಯವರು ದಶಮಿಯ ದಿವಸ ಕ್ಷೌರಮಾಡಿಸಿಕೊಂಡರೆಂದು ಹಲವು ವೈದಿಕರು ನಮ್ಮ ತಂದೆಯವರ ಮೇಲೆ ಆರೋಪ ಹೊರಿಸಿ ಸಿದರು. ನಮ್ಮ ತಂದೆಯವರು ೫೦ ರೂಪಾಯಿ ಕೊಟ್ಟು ಮತ್ತೊಮ್ಮೆ ಶ್ರೀಗಳವರನ್ನು ಭಿಕ್ಷೆಗೆ ಕರೆದರು. ಹೀಗೆ ಆರೋಪವನ್ನು ಹೊರಿಸಿಕೊಂಡು, ಹಣವನ್ನು ತೆತ್ತುವ ಪ್ರಸಂಗಗಳು ಬರುವುದು ವೈಷ್ಣವರಲ್ಲಿ ಪುರಾತನದಿಂದಲೂ ಬಂದ ಸಂಪ್ರದಾಯವೆಂದು ತೋರುತ್ತದೆ.

ಆಗಿನ ಕಾಲಕ್ಕೆ, ಹಾನಗಲ್ಲಿನಂತೆ ನವಿಲುಗುಂದವೂ ವಿದ್ಯಾವಂತರ ಊರೇ ಆಗಿತ್ತು. ಕುರುಡರಾದ ಚಿನ್ನ ಬಸಪ್ಪನವರು ಉತ್ಕೃಷ್ಟಕವಿಗಳು, ರಸಿಕರು ಅವರು ನಮ್ಮ ಮನೆಗೆ ಆಗಾಗ ಬಂದು ತಮ್ಮ ಭಕ್ತಿಪರ ಪದ ಗಳನ್ನು ಹಾಡಿತೋರಿಸುತ್ತಿದ್ದರು. ಅಲ್ಲದೆ, ಆಗಿನ ಕಾಲ ದಲ್ಲಿ ಈ ದೇಶದಲ್ಲಿಯ ಪಾತ್ರದವರ ಬಾಯಲ್ಲೆಲ್ಲ ಅವರ ಪದಗಳೇ. ನನ್ನ ಬಾಲ್ಯದ ಗುರುಗಳಾದ ತಮ್ಮಣ್ಣಶಾಸ್ತ್ರಿ

ಗಳೂ ಒಳ್ಳೇ ಕವಿಗಳು. “ವಂದಿಪೆನಿಂದಿಗೆ ನಾ ಜಗದ್ವಂದ್ಯ ನಗರೇಶನ ॥ ಘೋರಸಂಸಾರದಪಾರವಾರಿಧಿಯೊಳು, ದೂರಮಾಡೆಂಪೆನ್ನ ಮಾರಸಂಹಾರನೇ।’ ಎಂದು ಮುಂತಾಗಿ ಅವರು ಅಲ್ಲಿಯ ನಗರೇಶ್ವರನ ಮೇಲೆ ಕಟ್ಟಿದ ಪದವು ಅಲ್ಲಿ ಪ್ರತಿವಾರವೂ ಹಾಡಲ್ಪಡುತ್ತಿತ್ತು. ಮತ್ತೂ ಕೆಲವರು ಕವಿಗಳಿದ್ದರು ಅವರ ಹೆಸರುಗಳನ್ನು ಮರೆ ತಿರುವೆ. “ಜಡಜಾಕ್ಷಿ ಲಾಲ್ ಗಡಿಯೊಡೆಯನ ನೋಡೋಣ ನಡಿಯೆ॥” ಎಂಬುದಾಗಿ ಒಬ್ಬರು ಪದ ಮಾಡಿದ್ದರೆ, ಮತ್ತೊಬ್ಬರು “ಭೃಂಗವೋಲುವ ಗುರುಳೆ, ಎನಗ್ಹೀಂತಾದೀತ್ಹೇಳೆ” ಎಂಬ ಪದ ಕಟ್ಟಿದ್ದರು ಶೇಷ ಗಿರಿರಾವ ಗೋವೇಕರ ಎಂಬ ದಾಸಕೂಟದವರು ಮೇಲಿಂದ ಮೇಲೆ ನಮ್ಮ ಮನೆಗೆ ಬಂದು ದಾಸರ ಪದಗಳನ್ನು ಹಾಡಿ ತೋರಿಸುತ್ತಿದ್ದರು. ಆಗ ನನಗೆ ಅವುಗಳಲ್ಲಿ ಅಭಿರುಚಿ ಹುಟ್ಟಿತು. ಆದರೆ, ಕನ್ನಡದ ಬಗ್ಗೆ ಅಭಿಮಾನವು ಮಾತ್ರ ಇನ್ನೂ ಹುಟ್ಟಿರಲಿಲ್ಲ ಅಲ್ಲಿಯ ಕವಿಗಳನ್ನೂ ರಸಿಕರನ್ನೂ ನೋಡಿ, ನನಗೂ ಕವಿಯೂ ರಸಿಕನೂ ಆಗಬೇಕೆಂಬ ಸ್ಫೂರ್ತಿ ಹುಟ್ಟಿತು ಕವಿಯಾಗಬೇಕಾದರೆ, ಮಿಕ್ಕವ ರಂತೆ ಪ್ರಾಕೃತ ಕವಿಯಾಗಿ ಪ್ರಯೋಜನವೇನು? ಆಗುವು ದಾದರೆ ಸಂಸ್ಕೃತದಲ್ಲಿ ಕವಿಯಾಗಬೇಕು ಹಾಗೂ ಹೀಗೂ ಶ್ರಮಪಟ್ಟು, ೧೦-೧೫ ಶ್ಲೋಕಗಳನ್ನು ಗೀಚಿವೆ. ರಸಿಕ ನಾಗಬೇಕೆಂದು ಸತಾರನ್ನು ಕೊಂಡುಕೊಂಡು, ಗವಿಮಠಕ್ಕೆ ಹೋಗಿ ೧೦-೧೨ ಗತ್ತುಗಳನ್ನು ನುಡಿಸಲಿಕ್ಕೂ ಕಲಿತೆ. ಆದರೆ, ಇವೆರಡೂ ನನ್ನ ಸ್ವಭಾವಕ್ಕೆ ಕೃತ್ರಿಮವೆಂದು ತಿಳಿದು ಬಿಟ್ಟುಕೊಟ್ಟೆ.

ನವಲಗುಂದದಲ್ಲಿ ಆಗ ಭಜನೆಗಳ ಸಂಭ್ರಮ. ಬ್ರಹ್ಮಾನಂದರ ಶಿಷ್ಯರು ತಮ್ಮಣ್ಣಶಾಸ್ತ್ರಿಗಳು. ತಮ್ಮಣ್ಣಶಾಸ್ತ್ರಿಗಳ ವಾಣಿಯಲ್ಲಿ ಅದ್ಭುತವಾದ ಮೋಹಕಶಕ್ತಿ ಇದ್ದಿತು. ಅವರ ಪುರಾಣವನ್ನು ಕೇಳುವುದೆಂದರೆ ಅದೊಂದು ಸುದೈವ ಅವರ ಮೂಲಕ, ಆ ಊರಲ್ಲಿ ಬ್ರಹ್ಮಾನಂದರ ಶಿಷ್ಯವೃಂದವು ಬೆಳೆಯಿತು. ಊರಲ್ಲಿ ರಾಮನಾಮಸಪ್ತಾಹ, ಭಜನೆ, ಗ್ರಾಮಪ್ರದಕ್ಷಿಣೆಗಳು ನಡೆಯಹತ್ತಿದವು. ಆ ಶಿಷ್ಯರಲ್ಲನೇಕರು ವ್ಯಸನಾದಿಗಳಿಂದ ತುಂಬಾ ಕೂಡಿದವರಾಗಿದ್ದರು. ಅಂಥವರು ರಾತ್ರಿಹಗಲು ಜಾಗರಣೆಮಾಡಿ ಕಣ್ಣುಮುಚ್ಚಿಕೊಂಡು ರಾಮನಾಮುವನ್ನು ಜಪಿಸುವುದನ್ನು ನೋಡಿ, ಅಂಥ ಉತ್ಸವಗಳಬಗ್ಗೆ ನನಗೇಕೋ ಜಿಗುಪ್ಸೆಯುಂಟಾಯಿತು.

೧೯೦೮ನೆಯ ಇಸ್ವಿಯ ಕೊನೆಯ ಸುಮಾರಕ್ಕೆ ನಾವು ನವಲಗುಂದಬಿಟ್ಟು ವಿಜಾಪುರದಲ್ಲಿ ಮನೆಮಾಡಿದೆವು. ಏಕೆಂದರೆ ಧಾರವಾಡದಲ್ಲಿ ಆಗ ಪ್ಲೇಗು ಇತ್ತು. ನವಿಲುಗುಂದದಿಂದ ವಿಜಾಪುರಕ್ಕೆ ಹೋಗುವುದೆಂದರೆ ಅದೊಂದು ಕಾಶೀಯಾತ್ರೆಯ ಪ್ರವಾಸ. ಕ್ವಾರಂಟಾಯಿನ್ ಮುಂತಾದವುಗಳ ಮೂಲಕ ಎಷ್ಟುಸಲ ನಡುನಡುವೆ ನಿಲ್ಲಬೇಕಾಗುತ್ತಿತ್ತೋ ನೇಮವಿಲ್ಲ. ನಾವು ಆ ತೊಂದರೆ ತಪ್ಪಿಸಿಕೊಂಡು ವಿಜಾಪುರಕ್ಕೆ ಸುರಕ್ಷಿತವಾಗಿ ತಲುಪಿದೆವು. ಕಲಕೇರಿ ಗೋವಿಂದರಾಯರೆಂಬವರು ನಮ್ಮ ಸಲುವಾಗಿ ಮನೆ ಹಿಡಿದಿದ್ದರು. ಇವರು ನನ್ನ ತಂದೆಯವರ ಪರಮ ಸ್ನೇಹಿತರಾಗಿದ್ದ ಲಕ್ಷ್ಮಣರಾಯರ ಮಕ್ಕಳು. ಲಕ್ಷ್ಮಣರಾಯರು

ಶಿರಸ್ತೇದಾರರಾಗಿದ್ದಾಗ, ಕಚೇರಿಯಲ್ಲಿ ಆಕಸ್ಮಿಕವಾಗಿ ರಕ್ತ ಕಾರಿ ಸತ್ತರಂತೆ. ಆಗ ಅಂದರೆ ೧೮೮೫ನೆಯ ಇಸ್ವಿಯ ಸುಮಾರಕ್ಕೆ ನಮ್ಮ ತಂದೆ ಹಾನಗಲ್ಲಿನಲ್ಲಿ ಇದ್ದುದರಿಂದ, ಅವರಿಗೆ ಲಕ್ಷ್ಮಣರಾಯರು ವಿಜಾಪುರದಲ್ಲಿ ಹೀಗೆ ಸತ್ತ ಸುದ್ದಿ ತೀವ್ರ ತಿಳಿಯಲೇ ಇಲ್ಲ. ಏಕೆಂದರೆ ಗೋವಿಂದ ರಾಯರೇ ಮುಂತಾದವರು ಚಿಕ್ಕವರಿದ್ದರು ಲಕ್ಷ್ಮಣ ರಾಯರು ತಾವು ಗಳಿಸಿ ಉಳಿಸಿದ ಹಣವನ್ನೆಲ್ಲ ನಮ್ಮ ತಂದೆಯವರ ವಶಕ್ಕೆ ಕೊಟ್ಟಿರುತ್ತಿದ್ದರು ಅವರು ಸತ್ತ ಸುದ್ದಿ ೪-೬ ತಿಂಗಳುಗಳಮೇಲೆ ತಂದೆಯವರಿಗೆ ತಿಳಿದಾಗ, ಅವರು ಗೋವಿಂದರಾಯರನ್ನು ಕರಿಸಿ, ಅವರಿಗೆ ಹೀಗೆ ತಮ್ಮಲ್ಲಿದ್ದ ಅವರ ಧನದ ಸಂಗತಿ ತಿಳಿಸಿದರು ಗೋವಿಂದ ರಾಯರೂ ವಿಶ್ವಾಸದಿಂದ ಪುನಃ ತಂದೆಯವರಲ್ಲಿಯೇ ಅದನ್ನು ಇಟ್ಟು ಹೋದರು. ಮುಂದೆ ಅನೇಕ ವರುಷ ಗಳಮೇಲೆ, ಅವರ ಇಚ್ಛೆಯಂತೆ ಕೆರ್ಜಗಿಯಲ್ಲಿ ನಮ್ಮ ತಂದೆಯವರು ಕೊಂಡ ಹೊಲವನ್ನು ಅವರಿಗೆ ಕೊಟ್ಟು ಬಿಟ್ಟರು. ಹಾಗೆಯೇ ಮುಂದೆ ನನ್ನ ಮೊದಲಿನ ಮಾವಂದಿ ರಾದ ಮಂಗಳವೇಡೆ ಶ್ಯಾಮರಾಯರೂ ೧೦-೧೨ ಸಾವಿರ ರೂಪಾಯಿಗಳನ್ನು ಆಲೂರಲ್ಲಿದ್ದಾಗ ತಂದೆಯವರ ಕೈಯಲ್ಲಿ ಕೊಟ್ಟಿದ್ದರು. ತಂದೆಯವರು ಆಲೂರ ಹತ್ತರ ಧಾಣಕ ಶಿರೂರ ಮುಂತಾದ ಗ್ರಾಮಗಳಲ್ಲಿ ಕಬಜಾವತ್ತಿ ಹೊಲ ಗಳನ್ನು ಹಿಡಿದು ಬಡ್ಡೀ ವ್ಯವಹಾರ ನಡೆಯಿಸಿದ್ದರು. ಶ್ಯಾಮರಾಯರಿಗೆ ಹೊಲಗಳನ್ನು ಸಂಪಾದಿಸುವ ಕಡೆಗೆ ಒಲವು ಇಲ್ಲದ್ದರಿಂದ, ಆ ಒತ್ತಿ ವ್ಯವಹಾರಗಳನ್ನು ತೀರಿಸಿಕೊಟ್ಟರು.

ನಾವು ೧೮೯೮ರಿಂದ ೧೯೦೪-೫ರ ವರೆಗೆ ವಿಜಾಪುರದಲ್ಲಿ ಮನೆಮಾಡಿಕೊಂಡಿದ್ದೆವು ಅಲ್ಲಿ ಪಾಂಡುರಂಗರಾವ ಅಂಕಲೇಕರ ಇವರ ಹಿಂದಿನ ಮನೆಯಲ್ಲಿದ್ದೆವು. ನನ್ನ ತಾಯಿ ಮತ್ತು ಅಂಕಲೇಕರ ಇವರ ಹೆಂಡತಿ ರುಕ್ಮಿಣೀಬಾಯಿಯವರು ತೀರ ಅಕ್ಕತಂಗಿಯರಂತೆ ಇದ್ದರು. ತಾಯಿಯವರು ೧೯೦೦ರಲ್ಲಿ ತೀರಿಕೊಂಡರು. ಆದರೂ ನಾವೂ ಅಂಕಲೇಕರ ಮನೆಯವರೂ ಒಂದೇ ಮನೆಯವರಂತೆಯೇ ಇದ್ದೆವು. ಈಗಲೂ ಆ ನಾವು ಭಾಡೆ ಇದ್ದ ಮನೆಗೆ ಆಲೂರರವರ ಮನೆಯೆಂದೇ ಹೆಸರಿರುವುದೆಂದು ನಾನು ಕೆಲವು ವರ್ಷಗಳ ಹಿಂದೆ ಕೇಳಿದೆನು.

ಇರಲಿ; ಒಂದು ವರುಷ ಅಜ್ಞಾತವಾಸದಲ್ಲಿ ಕಳೆದು ೧೮೯೯ನೆಯ ಇಸ್ವಿಯ ಪ್ರಾರಂಭಕ್ಕೆ ಕಾಲೇಜಕ್ಕೆ ಹೊರಟೆನು. ಆಗ, ನನ್ನ ಮತ್ತು ನನ್ನ ಮಿತ್ರನಾದ ಹುರುಳಿಕೊಪ್ಪಿಯ ಕುಲಕರ್ಣಿ ಕಾಶೀರಾಯನ ಮುಂದಿನ ಮಹತ್ವದ ಪ್ರಶ್ನೆಯೆಂದರೆ ನಾವು ಯಾವ ಕಾಲೇಜಕ್ಕೆ ಹೋಗಬೇಕೆಂಬುದು. ಸಾಮಾನ್ಯತಃ ಕರ್ನಾಟಕದವರು ಡೆಕ್ಕನ ಕಾಲೇಜಕ್ಕೆ ಹೋಗುವುದು ಆಗಿನ ಪದ್ಧತಿ. ಆ ಪ್ರಕಾರ ನಾವೂ ಅಲ್ಲಿಗೆ ಅರ್ಜಿಮಾಡಿದ್ದೆವು. ಕೋಣೆಗಳು ಸಿಕ್ಕಿದ್ದವು. ಆದರೆ, ನಾವಿಬ್ಬರೂ ಹೊರಟು ಮಾತಾಡುತ್ತಿರುವಾಗ, ನಮ್ಮದೇ ಆದ ಫರ್ಗ್ಯೂಸನ್ ಕಾಲೇಜಕ್ಕೆ ಏಕೆ ಹೋಗಬಾರದೆಂಬ ವಿಚಾರವು ಹೊರಟಿತು. ಆಗ, ನನಗಿಂತ ಕಾಶೀರಾಯನು ಅಭಿಮಾನಿಯು ಮತ್ತು ಉತ್ಸಾಹಿಯು. ಫರ್ಗ್ಯೂಸನ್ ಕಾಲೇಜು ನಮ್ಮ ಕಾಲೇಜಾದರೂ ಅದರ ಪ್ರೊಫೆಸರರು ಟಿಳಕರಿಗೆ ವಿರೋಧಿಗಳಾದವರು.

ಗೋಖಲೆಯವರು ಪ್ಲೇಗಿನ ದಬ್ಬಾಳಿಕೆಯಲ್ಲಿ ಸರಕಾರದ ವರ ಕ್ಷಮೆ ಬೇಡಿಕೊಂಡಿದ್ದರಿಂದ ನಮಗೆ ಅವರು ಅತ್ಯಂತ ಅಪ್ರಿಯರಾಗಿದ್ದರು. ಅಲ್ಲದೆ, ಆ ಫರ್ಗ್ಯೂಸನ್ ಕಾಲೇಜದ ವರು, ಶಿವಾಜಿ ಉತ್ಸವದಲ್ಲಿ ಭಾಷಣಮಾಡಿದ ತಪ್ಪಿಗಾಗಿ ಪ್ರೊ. ಭಾನು ಇವರನ್ನು ಅದೇ ಆಗ ಮನೆಯಲ್ಲಿ ಕುಳ್ಳಿರಿಸಿ ದ್ದರು. ಇಂಥವರ ಕಾಲೇಜಕ್ಕೆ ನಾವು ಹೋಗುವುದು ಹೇಗೆ? ಇನ್ನು ಡೆಕ್ಕನ್ನ ಕಾಲೇಜಕ್ಕೆ ಹೋಗಬೇಕೆ ? ಅದು ಹೇಳಿ ಕೇಳಿ ಸರಕಾರದ ಕಾಲೇಜು. ಈ ಪೇಚಿನಲ್ಲಿ ಮಾಡು ವುದೇನು ? ವಿಚಾರ ಮಾಡಿಮಾಡಿ, ಕೊನೆಗೆ ನಾವು ನಮ್ಮ ಫರ್ಗ್ಯೂಸನ್ ಕಾಲೇಜಕ್ಕೇನೇ ಹೋದೆವು. ಆಗ, ನನ್ನ ಸ್ವದೇಶಾಭಿಮಾನದ ಪಾರಜವು ಎಷ್ಟರ ಮಟ್ಟಿಗೆ ಏರಿ ತ್ತೆಂದರೆ, ಡೆಕ್ಕನ ಕಾಲೇಜದ ಭವ್ಯವಾದ ಮತ್ತು ಸುಂದರ ವಾದ ಕಟ್ಟಡವನ್ನು ನೋಡಲಿಕ್ಕೆ ಕೂಡ ನಾನು ಮೂರು ವರ್ಷಗಳವರೆಗೆ ಹೋಗಲಿಲ್ಲ ! ಇರಬಹುದು ಅದೊಂದು ಭವ್ಯವಾದ ಕಟ್ಟಡ, ಎಂದು ಅಂದುಕೊಂಡೆ ! ಅದನ್ನು ಮೊದಲನೆಯ ಸಲ ನೋಡಿದ್ದು, ಜ್ಯೂನಿಯರದಲ್ಲಿರುವಾಗ ಒಂದನೆಯ ಎಲ್‌ಎಲ್‌ಬಿಯ 'ಲಾ' ಟರ್ಮು ತುಂಬಲಿಕ್ಕೆ (ಆಗ ಹಾಗೆ ಟರ್ಮು ತುಂಬಲಿಕ್ಕೆ ಬರುತ್ತಿತ್ತು) ಹೋದಾಗ.

ಕಾಲೇಜಕ್ಕೆ ಹೋದೊಡನೆ ನನಗೆ ಕಾಣಿಸಿದ್ದೇನೆಂದರೆ, ಅಲ್ಲಿಯ ಜಗತ್ತು, ಅಲ್ಲಿಯವರೆಗೆ ನನಗೆ ಪರಿಚಿತವಾಗಿ ರುವ ಜಗತ್ತಿಗಿಂತ ತೀರ ಬೇರೆಯಾಗಿರುತ್ತದೆಂಬುದು. ನಾನು ಹಳ್ಳಿಯ ಊರಲ್ಲಿ ಇದ್ದವ. ಧಾರವಾಡದಲ್ಲಿ ಮನೆ ಮಾಡಿಕೊಂಡು ಸಾಲೆಗೆ ಹೋದವ. ಆದ ಕಾರಣ, ನನ್ನ ಇರುವಿಕೆ ಶ್ರೀಮಂತತನದ್ದಿದ್ದರೂ ಸಾದಾತನದ್ದಿತ್ತು.

ಕಾಲೇಜು ಬಿಟ್ಟು ಮನೆಯಲ್ಲಿ ಕುಳಿತಾಗ, ನನ್ನೊಡನೆ ಮ್ಯಾಟ್ರಿಕ್ ಪಾಸಾದ ಕೆಲವು ನನ್ನ ಸ್ನೇಹಿತರು ಕಾಲೇಜದಿಂದ ರಜೆಯಲ್ಲಿ ಬಂದಾಗ ಭೆಟ್ಟಿಯಾಗುತ್ತಿದ್ದರು. ನೋಡುತ್ತೇನೆ, ಒಮ್ಮೆಲೆ ಅವರ ಆಚಾರ ವಿಚಾರಗಳಲ್ಲಿ ದೊಡ್ಡ ಬದಲು! ಅವರ ಆ ಆಡಂಬರ, ಆ ಸಿಗರೇಟು, ಅವರ ಆ ವಿಲಾಸದ ಉಡುಪು, ಅವರ ಆ ರೀತಿ, ಅವರ ಆ ತಾವು ಹೆಚ್ಚಿನವರೆಂಬ ಹೆಮ್ಮೆ ಇವೆಲ್ಲ ನನ್ನ ಮನದ ಮೇಲೆ ವಿಪರೀತ ಪರಿಣಾಮವನ್ನುಂಟುಮಾಡಿದ್ದವು ೧೮೯೫-೯೬ ಮತ್ತು ೯೬ನೆಯ ಇಸ್ವಿಗಳ ಸಾರ್ವಜನಿಕ ಸಂಸ್ಕಾರಗಳು ನನ್ನನ್ನೂ ನನ್ನ ಗೆಳೆಯನಾದ ಕಾಶೀರಾಯನನ್ನೂ ವಿಚಾರ ಮಾಡಲಿಕ್ಕೆ ಹಚ್ಚಿದವು. ಆದಕಾರಣ, ನಾವಿಬ್ಬರೂ ಕಾಲೇಜಕ್ಕೆ ಹೋದಬಳಿಕ, ಮಿಕ್ಕವರಂತೆ ನಡೆಯದೆ, ಅದಕ್ಕೆ ತೀರ ವಿರುದ್ಧವಾಗಿ ನಡೆಯಬೇಕೆಂದು ನಿಶ್ಚಯಿಸಿದೆವು. ಹಾಯಸ್ಕೂಲ ಕಾಲೇಜುಗಳ ಇರುವಿಕೆಯ ಅಂತರವನ್ನು ಅಳಿಸಿಬಿಡುವುದನ್ನು ಗೊತ್ತುಮಾಡಿದೆವು. ಹಾಗೆ ನೋಡಿದರೆ, ಡೆಕ್ಕನ ಕಾಲೇಜದಲ್ಲಿಗಿಂತ, ಈ ಫಿನ್‌ಪಾಟ್ ಬಡಬಡಕ ಕಾಲೇಜದಲ್ಲಿ ಬಡವರ ಸಂಖ್ಯೆಹೆಚ್ಚು. ಆದರೂ ಇಲ್ಲಿ ಕೂಡ, ಕಾಲೇಜ ವಿದ್ಯಾರ್ಥಿಗಳ ಆಚಾರ ಬೇರೆ, ಉಡುಪು ಬೇರೆ, ಆಟನೋಟಗಳು ಬೇರೆಯಾಗಿ ಕಂಡವು. ಮನೆಯಲ್ಲಿಯ ಇರುವಿಕೆಗಿಂತ ಮೇಲ್ತರಗತಿಯ ಇರುವಿಕೆ ಅಲ್ಲಿಯದು. ಕರ್ನಾಟಕದವರಂತೂ ತಮ್ಮ ದೇಶಬಿಟ್ಟು ಬಹಳ ದೂರ ಇರುವವರು. ಆದಕಾರಣ, ಅವರ ಪಾಲಕರೂ ಅವರ ಸಲುವಾಗಿ ಕೈ ಸಡಿಲುಮಾಡಿ ಹಣ ಕಳುಹಿಸುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿ ನಾವು ನಮ್ಮ ಸಾದಾತನವನ್ನು ಕಾಯ್ದು

ಕೊಳ್ಳುವುದು ಹೇಗೆ ? ಮೊದಮೊದಲು ದೃಢನಿಶ್ಚಯದಿಂದ ಆದಷ್ಟು ಸಾದಾತನವನ್ನು ಕಾಯ್ದುಕೊಂಡೆವು. ಕ್ರಾಪ್ ಬಿಡಿಸಲಿಲ್ಲ, ಟೆನಿಸ್ ಮುಂತಾದ ಆಟಗಳನ್ನು ಆಡಲಿಲ್ಲ. ಸೋಡಾ ಚಹಾ ಕುಡಿಯಲಿಲ್ಲ. ಆದಷ್ಟು ಹಳೆಯ ಸಂಸ್ಕಾರ ಗಳನ್ನು ಇಟ್ಟುಕೊಂಡಿದ್ದೆವು. ಆದರೆ, ಅದು ಬಹಳ ವರ್ಷ ನಡೆಯಲಿಲ್ಲ. ಒಂದೆರಡು ವರ್ಷಗಳಲ್ಲಿ ನಾವೂ ಮೆಲ್ಲಮೆಲ್ಲನೆ ಮಿಕ್ಕವರ ಹರಿಗೇ ಬಿದ್ದೆವು. ನನ್ನ ಮಿತ್ರನಾದ ಕಾಶೀ ರಾಯನಂತೂ ತೀರ ಮತ್ತೊಂದು ತುದಿಗೆ ಹೋಗಿಬಿಟ್ಟನು. ಇಂಥ ಪ್ರಸಂಗಗಳಲ್ಲಿ ತೀರ ವಿರುದ್ಧ ದಿಶೆಯಲ್ಲಿ ನಡೆಯು ವುದು ನನಗೆ ಸಹಜಸ್ವಭಾವವಾದುದರಿಂದ, ನಾನು ಅವ ನಷ್ಟು ಸೆಳವಿಗೆ ಬೀಳಲಿಲ್ಲ. ಜಗತ್ತಿನ ಆಡಂಬರಾದಿಗಳ ಪರಿಣಾಮವು ಹೀಗೆ ನನ್ನ ಮೇಲೆ ವಿಪರೀತವಾಗಿ ಆದ ಮತ್ತು ಅದರ ಮೂಲಕ ನಾನು ನನ್ನ ಆಚರಣೆಯ ಚಿತ್ತ ವನ್ನು ವಿರುದ್ಧ ತುದಿಗೆ ಮಸಣಿಸಲೆತ್ನಿಸಿದ ಅನೇಕ ಉದಾ ಹರಣೆಗಳನ್ನು ನನ್ನ ಜೀವನದಲ್ಲಿ ಕಾಣಬಹುದು. ಇರಲಿ. ಬರಬರುತ್ತ ನಾನೂ ಸ್ವಲ್ಪ ಬದಲಾದೆನು. ಮೊದಲಿನ ಸಾದಾತನವು ನನ್ನಲ್ಲಿಯೂ ಉಳಿಯಲಿಲ್ಲ. ಆದರೆ, ಹಿಂದಿನ ಸಾರ್ವಜನಿಕ ಸಂಸ್ಕಾರಗಳ ಮೂಲಕ, ಆ ವಿಲಾಸದಲ್ಲಿ ಒಂದು ಬಗೆಯ ಪೌರ್ವಾತ್ಯ ಆಡಂಬರವಿತ್ತು. ನಾಮದಾರ ಗೋಖಲೆಯವರು, ಮಿಕ್ಕದ್ದೆಲ್ಲವನ್ನೂ ಬದಲಿಸಿದರೂ ತಲೆಯ ಉಡುಪನ್ನು ಮಾತ್ರ ಬದಲಿಸಬಾರದೆಂದು ಅನ್ನು ತ್ತಿದ್ದರಂತೆ! ಅವರು ಇಂಗ್ಲಂಡಕ್ಕೆ ಹೋದಾಗ ಸಹ ತಲೆಯ ಪಗಡಿಯನ್ನು ಕಾಯಂ ಇಟ್ಟಿದ್ದರಂತೆ. ಹಿಂದೀ ಮನುಷ್ಯ ರಂತೆ ಕಾಣುವುದು ಹಿಂದೀಯರ ಕರ್ತವ್ಯವಲ್ಲವೆ ? ಇಂಥ

ಬಿಸಿಲು ದೇಶದಲ್ಲಿ ಕೂಡ, ಯುರೋಪಿಯನ್ನರು ತಮ್ಮ ರಾಷ್ಟ್ರೀಯ ಉಡುಪುಗಳನ್ನೇ ಧರಿಸುವರಲ್ಲ ! ಅದರ ಗೂಢ ವೇನು ? ಅವರು ಅಂಧರೋ ನಾವು ಅಂಧರೋ? ಇಂಥ ಕ್ಷುದ್ರ ಸಂಗತಿಗಳಲ್ಲಿಯೇ ದೇಶಾಭಿಮಾನವು ಅಡಗಿದೆಯೋ ಎಂದು ಕೇಳಬಹುದು ಹಾಗೇನೂ ನಿಕ್ಷುಣ್ಣವಾಗಿ ಹೇಳ ಲಿಕ್ಕೆ ಬಾರದಿದ್ದರೂ, ಇಂಥ ಚಿಲ್ಲರೆ ಸಂಗತಿಗಳ ಮೇಲಿಂದ ಅವರ ತಲೆಯು ಪರವಶವಾಗುತ್ತ ನಡೆದಿರುತ್ತದೆಂಬುದರ ದ್ಯೋತಕವು ಅದು, ಎಂದು ಸ್ಥೂಲವಾಗಿ ಮಾತ್ರ ಹೇಳ ಬಹುದು. ಇರಲಿ. ನಾನಂತೂ ಕ್ರಾಪ್ ಬಿಡಿಸಲಿಲ್ಲ. ನನ್ನ ಮಿತ್ರರಾದ ಕಟ್ಟಿ ಮಧ್ವಾಚಾರ್ಯರು ನನಗಿಂತ ನಿಷ್ಠಾ ವಂತರು. ಪ್ರತಿಯೊಬ್ಬರೂ ತಮಗೆ ಇರುವ ವ್ಯಸನಾದಿ ಗಳಲ್ಲಿಯೂ ವಿಲಾಸಭೋಗದಲ್ಲಿಯೂ ಕನಿಷ್ಠಪಕ್ಷಕ್ಕೆ ಒಂದೆ ರಡನ್ನಾದರೂ ಬಿಡುವ ದೃಢನಿಶ್ಚಯ ಮಾಡಬೇಕೆಂದು ಹೇಳಿ ಅಂಥವರದೊಂದು ಗುಂಪನ್ನು ಮಾಡಿದರು. ಆಗ, ನಾನೂ ಕೆಲವನ್ನು ಬಿಟ್ಟೆನು. ಆ ಗುಂಪಿಗೆ ಹೆಸರನ್ನೇನೂ ಇಟ್ಟದ್ದಿಲ್ಲ. ಅದರಲ್ಲಿ ೬-೭ ಜನರಿಗಿಂತ ಹೆಚ್ಚಿಗೆ ಮೆಂಬರರು ಸೇರಲಿಲ್ಲ.

**ಸಾರ್ವಜನಿಕ ವಾತಾವರಣ:**—ನಾನು ಕಾಲೇಜಕ್ಕೆ ಹೋದ ವರ್ಷದಿಂದ ' ಲಾ ' ಕಾಲೇಜನ್ನು ಬಿಡುವವರೆಗಿನ ವರ್ಷಗಳೆಂದರೆ (೧೮೯೯-೧೯೦೫) ಲಾರ್ಡ ಕರ್ಝನ್ ಸಾಹೇ ಬರ ಭರಭರಾಟಿಯ ಕಾರಭಾರದ ಕಾಲ. ಲೋಕಮಾನ್ಯ ಟಿಳಕರು ಅದೇ ವರ್ಷ (೧೮೯೯) ಸರಕಾರದವರೊಡನೆ ಯುದ್ಧಹೂಡಿ, ತಾವು ಸಾಯುವವರೆಗೆ ಅಂದರೆ ಸುಮಾರು ೨೦ ವರ್ಷಗಳವರೆಗೆ ಬಡಿದಾಡಿದರು. ಟಿಳಕರು ಒಂದು

ವರ್ಷ ಕಾರಾಗ್ರಹವಾಸವನ್ನನುಭವಿಸಿ ಆದೇ ಬಿಡಲ್ಪಟ್ಟಿದ್ದರು (ಸಪ್ಟೆಂಬರ ೧೮೯೮). ಆದರೆ ಬಂದಕೂಡಲೆ ನೋಡುತ್ತಾರೆ, ದೇಶದಲ್ಲಿ ಸರ್ವತ್ರ ಅಶಾಂತತೆ. ಪ್ಲೇಗು ನಾಲ್ಕೂ ಕಡೆಗೆ ಹಬ್ಬಿ, ತನ್ನ ಕರಾಳ ದವಡೆಯಲ್ಲಿ ಸಾವಿರಾರು ಜನರನ್ನೆಳೆದುಕೊಳ್ಳುತ್ತಿತ್ತು. ೧೮೯೮ರಲ್ಲಿ ಮತ್ತೆ ಬರಗಾಲ. ಸಾಲದುದಕ್ಕೆ ಪ್ಲೇಗಿನ ವೈಲಿಯನ್ನು ಚುಚ್ಚುವ ಹಾವಳಿ. ಟಿಳಕರನ್ನು ಬಿಟ್ಟಿದ್ದರೂ ಸರದಾರ ನಾತು ಬಂಧುಗಳನ್ನು ಬಿಟ್ಟಿರಲಿಲ್ಲ. ಇವೆಲ್ಲ ಕಾರಣಗಳ ಮೂಲಕ ಟಿಳಕರಿಗೆ ಸರಕಾರದವರಮೇಲೆ ಪುನಃ ಶಸ್ತ್ರವನ್ನೆತ್ತ ಬೇಕಾಯಿತು. ೧೮೯೯ನೆಯ ಇಸ್ವಿಯ ಜುಲೈ ತಿಂಗಳಲ್ಲಿ ಅವರು ಕೇಸರಿ ಪತ್ರದಲ್ಲಿ "ಪುನಶ್ಚ ಹರಿಓಂ" ಎಂದು ಲೇಖಬರೆಯಲಿಕ್ಕೆ ಪ್ರಾರಂಭಿಸಿದರು. ನಾತು ಬಂಧುಗಳ ಬಿಡುಗಡೆಮಾಡುವ ಸಲುವಾಗಿ ಸರಕಾರದವರ ವಿರುದ್ಧ ಕಡುತರವಾದ ಬರಹಗಳನ್ನು ಬರೆದರು. ಅವರ ಪರಿಣಾಮವಾಗಿ ನಾತುಬಂಧುಗಳು ಸುಮಾರು ೨ ೧/೨ ವರ್ಷಗಳ ನಂತರ ೨೨-೧೨-೧೮೯೯ರಲ್ಲಿ ಬಿಡಲ್ಪಟ್ಟರು. ೧೮೯೯ನೆಯ ಇಸ್ವಿಯ ಜೂನತಿಂಗಳ ಸುಮಾರಕ್ಕೆ ಬೆಳಗಾಂವಿ ಧಾರವಾಡ ಜಿಲ್ಹೆಗಳಲ್ಲಿ ಜುಲುಮೆಯಿಂದ ಪ್ಲೇಗಿನ ವೈಲಿ ತೆಗೆಯುವ ಕ್ರಮವು ಪ್ರಾರಂಭವಾಯಿತು. ಅದರಿಂದ ಜನರೆಲ್ಲರೂ ತ್ರಸ್ತರಾದರು. ಪ್ಲೇಗು ಬೇಕು, ಈ ವೈಲಿಯ ಜುಲುಮೆ ಬೇಡವೆಂದು ಜನರು ಅನ್ನಹತ್ತಿದರು. ಧಾರವಾಡವು ಈ ವೈಲಿಯ ವಿರುದ್ಧ ಮೊದಲಿಗೆ ಚಳವಳಿಯನ್ನು ಹೂಡಿತು. ಪ್ಲೇಗಿನ ರಸಿಕೆಯಿಂದ ಅನೇಕರು ಇಲ್ಲಿ ಬೇರೆಬೇರೆ ಬೇನೆಗಳಿಂದ ನರಳುತ್ತಿದ್ದರು. ಅದ

ನ್ನೆಲ್ಲ ಧಾರವಾಡದವರು ಬೈಲಿಗೆ ತಂದರು. ಧಾರವಾಡಕ್ಕೆ ಆಗ ವಿಶೇಷ ಮಹತ್ವವು ಪ್ರಾಪ್ತವಾಯಿತು. ಮೈಲಿಯನ್ನು ಚುಚ್ಚುವ ಪದ್ಧತಿಯು ಇನ್ನೂ ಪರಿಪಕ್ವವಾಗಿದ್ದಿಲ್ಲ; ಪ್ರಯೋಗಾವಸ್ಥೆಯಲ್ಲಿತ್ತು. ಪ್ರಯೋಗವನ್ನು ಮಾಡುವುದು ಯಾರಮೇಲೆ? ಮೂಕಕುರಿಗಳಂಥ ಬಡ ಹಿಂದೀಜನರಮೇಲೆಯೇ ಅಲ್ಲವೆ? ವೈಜ್ಞಾನಿಕರ ಕೈಯೊಳಗಿನ ಕಪ್ಪೆಗಳಂತೆ ಜನರು ವಿಲಿವಿಲಿ ಒದ್ದಾಡಹತ್ತಿದರು. ಹೀಗೆ ಆ ಮೈಲಿಯ ಮೂಲಕ ರೋಗಗ್ರಸ್ತರಾದವರ ಪೂರ್ಣ ಹೆಸರುಗಳನ್ನು ಧಾರವಾಡದಿಂದ ಗುರೂಜಿಯವರು ಕೇಸರೀಪತ್ರಕ್ಕೆ ಕಳುಹಿಸಿಕೊಟ್ಟರು. ಕೂಡಲೆ ಟಿಳಕರು ಅವನ್ನು ಮುದ್ರಿಸಿ, ಪ್ಲೇಗಿನ ಮೈಲಿಯ ಒತ್ತಾಯದ ವಿರುದ್ಧ ಲೇಖಗಳನ್ನು ಬರೆದರು. ಧಾರವಾಡದಲ್ಲಿ ಕರ್ನಾಟಕವೃತ್ತ, ರಾಜಹಂಸ ಮುಂತಾದ ಪತ್ರಗಳು ಮೈಲಿಯಿಂದಾಗುವ ಭಯಂಕರ ದುಷ್ಪರಿಣಾಮಗಳನ್ನು ಸರಕಾರದವರ ಲಕ್ಷ್ಯಕ್ಕೆ ತಂದುಕೊಟ್ಟವು. ಇವೆಲ್ಲವುಗಳ ಪರಿಣಾಮವಾಗಿ ಇನಾಕ್ಯುಲೇಶನ್ ಕಮಿಶನ್ ಧಾರವಾಡಕ್ಕೆ ಬಂದಿತು. ಪ್ರಿನ್ಸಿಪಾಲ ವೆಂಕಟ ರಂಗೋ ಕಟ್ಟಿ, ಮಾಯಿಘುರಕರ ಮುಂತಾದವರ ಸಾಕ್ಷಿಗಳಾದವು. ಅವರು, ಧಾರವಾಡದ ಮುಖಂಡರು ಮೈಲಿಯ ವಿರುದ್ಧವಾಗಿ ಎಬ್ಬಿಸಿದ ಹುಯಿಲಿಗೆ ಬೆಂಬಲಕೊಟ್ಟರು. ಆದಕಾರಣ ೧೯೦೦ ನೆಯ ಫೆಬ್ರುವರಿಯಲ್ಲಿ ಹೀಗೆ ಒತ್ತಾಯದಿಂದ ಮೈಲಿ ಚುಚ್ಚಕೂಡದೆಂದು ಸರಕಾರದವರಿಗೆ ಸರ್ಕ್ಯುಲರ ಹೊರಡಿಸಬೇಕಾಯಿತು. ಆದರೆ, ಇಲ್ಲಿ ಈ ಸಾಕ್ಷಿಗಳು ನಡೆದಾಗ, ಗುರೂಜಿಯವರು ಕಾಶಿಯಲ್ಲಿದ್ದರು. ಕಾಲಿದಾಸ

ವೆಂಬ ಪತ್ರಿಕೆ ತೆಗೆಯುತ್ತಿದ್ದರು ಅಲ್ಲಿ ಅವರು ಸೆರೆ ಹಿಡಿಯಲ್ಪಟ್ಟರು. ಮುಂದೆ ಅವರನ್ನು ಜಾಮೀನಿನ ಮೇಲೆ ಬಿಟ್ಟರೇನೋ ಸರಿ. ಆದರೆ, ಆ ಪರಸ್ಥಳದಲ್ಲಿ ಅವರಿಗೆ ತೀವ್ರ ಜಾಮೀನುದಾರರು ಸಿಗದ್ದರಿಂದ ಒದ್ದಾಡ ಬೇಕಾಯಿತು.

೧೯೦೦ನೆಯ ಇಸ್ವಿಯ ಸಾರ್ವಜನಿಕ ಚಟುವಟಿಕೆ ಗಳೆಂದರೆ ರಾಯಗಡದಲ್ಲಿ ೨೩-೪-೧೯೦೦ನೆಯ ದಿವಸ ಅತಿ ದೊಡ್ಡ ಪ್ರಮಾಣದಲ್ಲಿ ಶಿವಾಜಿ ಉತ್ಸವವಾದದ್ದು, ಮತ್ತು ಲ್ಯಾಂಡ ರೆವ್ಹಿನ್ಯೂ ಬಿಲ್ಲಿನ ವಿರುದ್ಧ ಚಳವಳಿ ಎದ್ದದ್ದು. ಮೇಥಾ ಗೋಖಲೆಯವರು ಸರಕಾರದವರಿಗೆ ತಮ್ಮ ಅಸಂ ತೋಷವನ್ನು ವ್ಯಕ್ತಪಡಿಸುವುದಕ್ಕೋಸ್ಕರ, ಲ್ಯಾಂಡ ರೆವ್ಹಿನ್ಯೂ ಬಿಲ್ಲು ಕೌನ್ಸಿಲದಲ್ಲಿ ಪಾಸಾಗುವ ಹೊತ್ತಿನಲ್ಲಿ ಅಲ್ಲಿ ಇರದೆ ಅಸಹಕಾರಮಾಡಿ ಹೊರಟುಹೋದರು. ಇದೇ ವರ್ಷ, ವಿದ್ಯಾಖಾತೆಯ ಡಾಯರಕ್ಟರರಾದ ಜಾಯಿಲ್ಸ ಸಾಹೇಬರು ರಾಜಕೀಯ ಅಸಂತೋಷದ ಸುಂಕವು ವಿದ್ಯಾರ್ಥಿಗಳಲ್ಲಿ ಹಬ್ಬದಂತೆ ಮಾಡುವುದಕ್ಕೆ ಒಂದು ಅದ್ಭುತವಾದ ಯುಕ್ತಿಯನ್ನು ಶೋಧಿಸಿ ತೆಗೆದರು. ಅದಾವು ದೆಂದರೆ, ಹುಡುಗರನ್ನು ಕಟ್ಟಿಹಾಕುವುದು! ರಾಜಕೀಯ ಸಭೆಗಳಿಗೇ ಅವರನ್ನು ಹೋಗಗೊಡದಿದ್ದರೆ ತೀರಿತು. ಅಸಂತೋಷವು ತಾನಾಗಿಯೇ ಕಡಿಮೆಯಾಗುತ್ತದೆಂದು ಈ ರಾಜಶ್ರೀಗಳವರ ತರ್ಕ! ತಾವು ವಿದ್ಯಾಖಾತೆಯ ನಿರಂಕುಶಪ್ರಭುಗಳು, ವಿದ್ಯಾರ್ಥಿಗಳು ತಮ್ಮ ಪ್ರಜೆಗಳು. ಅಂದಬಳಿಕ ಒಂದು ಸರ್ಕ್ಯುಲರ ಬಾಣ ಬಿಟ್ಟರೆ ತೀರಿತು. ಪ್ರಜೆಗಳೆಲ್ಲರೂ ಹತವೀರ್ಯರಾಗುವರೆಂದು ತಿಳಿದು

ವಿದ್ಯಾರ್ಥಿಗಳು ಯಾವ ರಾಜಕೀಯ ಸಭೆಗೂ ಹೋ
ಕೂಡದೆಂದು ಹುಕುಂ ಹೊರಡಿಸಿದರು ಅದನ್ನು ಜ್ಯಾ
ಯಲ್ಲಿ ತರುವುದು ಒಹಳ ಕಠಿಣವಿತ್ತೆಂಬ ಮಾತು ಅವರಿಗು
ಗೊತ್ತಿತ್ತು ಅಂಜಿದಷ್ಟು ಅಂಜಲಿ ಎಂದು ಅವರ ವಿಚಾ
ಆದರ, ಅದೇ ವರ್ಷ ನಾವು ಫರ್ಗ್ಯೂಸನ್ ಕಾಲೇಜದ
ಊಟದ ಕ್ಲಬ್ಬುಗಳಲ್ಲಿ ಗಣಪತಿ ಉತ್ಸವಗಳನ್ನು ದೊ
ಪ್ರಮಾಣದಲ್ಲಿ ಪ್ರಾರಂಭಿಸಿದೆವು. ನಾನು ನಾಲ್ಕನೆ
ಕನ್ನಡ ಕ್ಲಬ್ಬಿನ ಸುಪರಿಂಟೆಂಡೆಂಟನಾಗಿದ್ದೆನು ಪ್ರ
ವರುಷ ಗಜಾನನ ಭಾಸ್ಕರ ವೈದ್ಯ, ಪ್ರೊ ಭಾನ
ಮುಂತಾದ ಪ್ರಸಿದ್ಧ ದೇಶಭಕ್ತರ ಉಪನ್ಯಾಸಗಳನ್ನು ಮಾ
ಸುತ್ತಿದ್ದೆನು

೧೯೦೧ರಲ್ಲಿಯ ಸಾರ್ವಜನಿಕ ಚಳವಳಿಯೆಂದರ ಟಿ
ಕರ ವಿರುದ್ಧ ಎದ್ದ "ತಾಯಿಮಹಾರಾಜ" ಇವರ ಖಟ್ಲೆಯು
ತಾಯಿಮಹಾರಾಜರೆಂಬವರು ಬಾಬಾಮಹಾರಾಜರ ಚಿ
ಹೆಂಡತಿ ಬಾಯುವಾಗ ಬಾಬಾಮಹಾರಾಜರು ತಮ
ದೊಡ್ಡ ಆಸ್ತಿಗೆ ತಮ್ಮ ಪರಮಸ್ನೇಹಿತರಾದ ಟಿಳಕರೆ
ಮುಂತಾದವರನ್ನು ಟ್ರಸ್ಟಿಗಳನ್ನಾಗಿ ನೇಮಿಸಿದ್ದರು. ಟಿ
ಕರ ಹೇಳಿಕೆಯ ಪ್ರಕಾರ ತಾಯಿಮಹಾರಾಜಳು (ಹೆಣ್ಣು
ಮಕ್ಕಳಿಗೂ ಕೂಡ ಹೀಗೆ 'ಮಹಾರಾಜ' ಎಂಬುದಾ
ಕರೆಯುವುದು ಮರಾಠಿಯ ವಿಲಕ್ಷಣ ಪದ್ಧತಿ) ಜಗನ್ನಾ
ನೆಂಬುವನನ್ನು ದತ್ತಕ ತೆಗೆದುಕೊಂಡಳು. ಮುಂದೆ ತಿರು
ಬಿದ್ದು, ಮತ್ತೊಬ್ಬನನ್ನು ದತ್ತಕ ತೆಗೆದುಕೊಂಡಳು.
ಮೊದಲನೆಯ ದತ್ತಕ ಕಾಯಂಮಾಡಿಸುವುದಕ್ಕೆ ಈ ಖಟ್ಲೆ
ಹೊರಟಿತು. ವಸ್ತುತಃ ಇದು ಖಾಸಗೀ ಸ್ವರೂಪದ ಖಟ್ಲೆ

ಆದರೆ, ಹೇಗಾದರೂ ಮಾಡಿ ಟಿಳಕರನ್ನು ಹಣ್ಣುಮಾಡ ಬೇಕೆಂದು ಹೊಂಚುಹಾಕಿಕೊಂಡು ಕುಳಿತವರಿಗೆ ಇದು ಅನ್ನವಾಯಿತು. ರ್‍ಯಾಂಡಸಾಹೇಬರ ಕೊಲೆಯಲ್ಲಿ ಸರ ಕಾರದವರಿಗೆ ಈ ಟಿಳಕರ ಬೇಟಿ ಸಿಕ್ಕಿರಲಿಲ್ಲ ಟಿಳಕರು ಸೆರೆಮನೆಯಿಂದ ಬಿಟ್ಟುಬಂದಬಳಿಕ, ಸಾತಾರೆ ಜಿಲ್ಲೆಯ ಪ್ರತಾಪಗಡವೆಂಬಲ್ಲಿಯ ಒಬ್ಬ ಪೂಜಾರಿಯು ಸರಕಾರದ ವಿರುದ್ಧ ಬಂಡು ಎಬ್ಬಿಸುವ ಒಳಸಂಚು ಮಾಡಿರುತ್ತಾ ನೆಂದು ಆತನನ್ನು ಹಿಡಿದು, ಆತನ ಬಾಯಿಯಿಂದ ಟಿಳ ಕರ ಹೆಸರು ತಗೆದುಕೊಂಡು ಟಿಳಕರನ್ನು ಪೇಚಿನಲ್ಲಿ ಹಾಕಬೇಕೆಂದು ಪ್ರಯತ್ನವಾಯಿತು ಆದರೆ ಆತನು ಇಷ್ಟೊಂದು ಸುಳ್ಳುಹೇಳಲಿಕ್ಕೆ ಒಪ್ಪದ್ದರಿಂದ ಆಗ ಕೂಡ ಈ ಬೇಟೆಯು ಪಾರಾಯಿತು ಈಸಲ ಬೇರೊಂದು ರೀತಿ ಯಿಂದ ಟಿಳಕರ ಮೇಲೆ ಗಂಡಾಂತರ ಒದಗಿತು ಟಿಳ ಕರು ಸುಳ್ಳುಸಾಕ್ಷಿ ಕೊಟ್ಟರು, ಖೊಟ್ಟಿಕಾಗದ ಮಾಡಿ ಸಿದರು ಇವೇ ಮುಂತಾದ ಭಯಂಕರವಾದ ಆರೋಪ ಗಳನ್ನು ಅವರ ಮೇಲೆ ಆಸ್ಟಿನ್‌ಸಾಹೇಬರೆಂಬವರು ಹಾಕಿ, ಅವರ ನೈತಿಕ ನಿರ್ಮಲತೆಗೆ ಕುರಾಡವನ್ನಿಡುವುದಕ್ಕೆ ಪ್ರಯತ್ನಿಸಿದರು. ಅವೆಲ್ಲವುಗಳಿಂದ ಟಿಳಕರು ದೋಷ ಮುಕ್ತರಾದುದರಿಂದ ಕೊನೆಗೆ ಅವರ ಕೀರ್ತಿ, ಬೆಂಕಿಗೆ ಹಾಕಿದ ಬಂಗಾರದ ಕಾಂತಿಯಂತೆ ಬೆಳೆಯಿತೆಂಬುದು ನಿಜ. ಆದರೆ ಅಷ್ಟು ಆಗುವಷ್ಟರಲ್ಲಿ ಅವರ ಜೀವವೆಲ್ಲ ಹಣ್ಣಾಗಿ ಹೋಯಿತು; ಮನೆಯೆಲ್ಲ ತೊಳೆದುಹೋಯಿತು. ಅವ ರಿಗೆ ೫೦-೬೦ ಸಾವಿರ ರೂಪಾಯಿ ಕೈಲೆ ಖರ್ಚುಮಾಡ ಬೇಕಾಯಿತು. ಸರಕಾರದವರಿಗೂ ಟಿಳಕರ ಹೆಸರನ್ನು

ಕೆಡಿಸಲೆತ್ನಿಸಿದ ಈ ಉಪದ್ವ್ಯಾಪದಲ್ಲಿ ೬೦-೭೦ ಸಾವಿರ ರೂಪಾಯಿ ನಿರರ್ಥಕ ಖರ್ಚುಮಾಡಬೇಕಾಯಿತು. ಆದರೆ ಆ ದುಡ್ಡು ಅವರದಲ್ಲ; ಆದ್ದರಿಂದ ಅವರಿಗೆ ಅದರ ದುಃಖ ವಿಲ್ಲ. ೧೬-೧೧-೧೯೦೧ರಿಂದ ೧೯೨೦ರವರೆಗೆ ಅಂದರೆ ಟಿಳಕರು ಸಾಯುಸಾಯುವವರೆಗೆ ಈ ಖಟ್ಲೆಯು ಒಂದಲ್ಲೊಂದು ರೀತಿಯಲ್ಲಿ ಟಿಳಕರನ್ನು ತೊಡಕಿಸಿತ್ತು. ಇರಲಿ ೧೯೦೧ ನೆಯ ಇಸ್ವಿಯ ನವಂಬರದಿಂದ ೧೯೦೨ನೆಯ ಇಸ್ವಿಯ ಎಪ್ರಿಲಿನವರೆಗೂ ಆಸ್ಟಿನ್ ಸಾಹೇಬರ ಕೋರ್ಟಿನಲ್ಲಿ, ೨-೧೦-೧೯೦೨ ರಿಂದ ೨೪-೮-೧೯೦೩ರ ವರೆಗೆ ಕ್ಲೆಮೆಂಟ್ಸ ಸಾಹೇಬರ ಕೋರ್ಟಿನಲ್ಲಿ ಆಗಾಗ ಈ ಖಟ್ಲೆಯು ನಡೆದಾಗ ನಾನೂ ನನ್ನ ಮಿತ್ರರಾದ ಸಾವರಕರರೇ ಮುಂತಾದವರೂ ಕಾಲೇಜು ತಪ್ಪಿಸಿ ಖಟ್ಲೆ ಕೇಳಲಿಕ್ಕೆ ಹೋಗುತ್ತಿದ್ದೆವು

೧೯೦೨ನೆಯ ಮೇ ಮತ್ತು ಜೂನ ತಿಂಗಳುಗಳಲ್ಲಿ ಪುಣೆಗೆ ಹಂಸಸ್ವರೂಪ ಸ್ವಾಮಿಗಳೆಂಬ ಉತ್ಕೃಷ್ಟ ಸಾಧುಗಳು ಬಂದಿದ್ದರು. ಅವರ ಉಪನ್ಯಾಸಗಳಿಗೆ ನಾವು ತಪ್ಪದೆ ಹೋಗುತ್ತಿದ್ದೆವು. ೧೯೦೩ನೆಯ ಜನವರಿ ೧ನೆಯ ತಾರೀಖಿನ ದಿವಸ, ಇತಿಹಾಸಪ್ರಸಿದ್ಧವಾದ ಕರ್ಝನ ಸಾಹೇಬರ ದಿಲ್ಲೀ ದರಬಾರು. ಅದೇ ಅವರ ಆಳಿಕೆಯ ಪರಮಾವಧಿ ಏರಿಕೆಯ ದಿವಸ ೧೯೦೩ನೆಯ ದಿಸೆಂಬರಿನಲ್ಲಿ ಪ್ರಸಿದ್ಧ ತತ್ವಜ್ಞಾನಿಗಳಾದ ಹರ್ಬರ್ಟ ಸ್ಪೆನ್ಸರ ಸಾಹೇಬರು ಸತ್ತರು. ತತ್ವಜ್ಞಾನವನ್ನು ಅಭ್ಯಾಸಮಾಡುತ್ತಿದ್ದ ನನಗೆ ಆತನ ಗ್ರಂಥಗಳಲ್ಲಿ ಬಹಳ ಅಭಿರುಚಿ. ೧೯೦೩ನೆಯ ಇಸ್ವಿಯಲ್ಲಿ ಬಂಗಾಲದವರು ಶ್ರೀಶಿವಾಜಿ ಉತ್ಸವವನ್ನು ದೊಡ್ಡ

ಪ್ರಮಾಣದಲ್ಲಿ ಜರುಗಿಸಿದರು. ಅದೇ ಮುಂದೆ ಅವರು ತಮ್ಮ ಪ್ರತಾಪಾದಿತ್ಯನ ಉತ್ಸವ ಮಾಡಲಿಕ್ಕೆ ಮೂಲ ವಾಯಿತು. ಇದೇ ಇಸ್ವಿಯಲ್ಲಿ ಬಂಗಾಲದ ಪ್ರಸಿದ್ಧ ದೇಶಭಕ್ತಳಾಗಿದ್ದ ಸರಲಾದೇವಿ ಚೌಧಾರಾಣಿ ಎಂಬವರು ಬಂಗಾಲದ ತುಂಬೆಲ್ಲಾ ವ್ಯಾಯಾಮ ಶಾಲೆಗಳನ್ನು ಸ್ಥಾಪಿಸುವ ಪ್ರಚಂಡ ಕಾರ್ಯವನ್ನು ಕೈಕೊಂಡರು ಅವರ ಗಂಡನು ಮೈಸೂರಿನ ಕಾಲೇಜಿನಲ್ಲಿ ಕೆಲವು ದಿವಸ ಪ್ರೊಫೆಸರಾಗಿದ್ದನು. ಈ ವ್ಯಾಯಾಮಶಾಲೆಗಳೇ ಮುಂದೆ ದೇಶದಲ್ಲೆಲ್ಲ ಅಖಂಡವಾದ ಕೋಲಾಹಲವನ್ನೆಬ್ಬಿಸಿದ ವಂಗಭಂಗ ಚಳವಳಿಗೆ ಆಧಾರಸ್ತಂಭಗಳಾದವು. ೧೯೦೪ ನೆಯ ಇಸ್ವಿಯಲ್ಲಿ ಮುಂಬಯಿಯಲ್ಲಿ ಪ್ರಚಂಡವಾದ ರಾಷ್ಟ್ರೀಯ ಸಭೆ ನೆರೆಯಿತು. ಮತ್ತು ಕಣ್ಣು ಕುಕ್ಕಿಸುವಷ್ಟು ಮನೋಹರವಾದ ಪ್ರದರ್ಶನವು ಏರ್ಪಡಿಸಲ್ಪಟ್ಟಿತು. ೧೯೦೫ ನೆಯ ಇಸ್ವಿಯ ಮೇ ತಿಂಗಳಲ್ಲಿ ಜಪಾನಿನಲ್ಲಿ ಶ್ರೀಶಿವಾಜಿ ಉತ್ಸವವು ದೊಡ್ಡ ಪ್ರಮಾಣದಲ್ಲಿ ಜರುಗಿತು. ಇತ್ತ ಅದೇ ವರ್ಷ, ಹಿಂದುಸ್ಥಾನವನ್ನು ಅನೇಕ ವರ್ಷಗಳ ವರೆಗೆ ಅಲ್ಲೋಲಕಲ್ಲೋಲ ಮಾಡಿಬಿಟ್ಟ ವಂಗಭಂಗದ ಭಯಂಕರ ಚಳವಳಿ ಎದ್ದಿತು. ಇದೇ ವರ್ಷ ಶ್ಯಾಮಜಿ ಕೃಷ್ಣವರ್ಮಾ ಇವರು ಇಂಗ್ಲಂಡದಲ್ಲಿ ' ಇಡಿಯಾ ಹಾವುಸ" ತೆಗೆದರು.

ನಾನು ಪ್ರೌಢವಿದ್ಯಾರ್ಥಿದೆಸೆಯಲ್ಲಿರುವಾಗ ನನ್ನ ಸುತ್ತಲಿನ ಸಾರ್ವಜನಿಕ ವಾತಾವರಣವು ಈ ಬಗೆಯದಾಗಿತ್ತು. ಇಂಥ ವಾತಾವರಣದಲ್ಲಿ ನಾನು ೧೯೦೫ರ ವರೆಗೆ ಫರ್ಗ್ಯೂಸನ್ ಕಾಲೇಜಿನಲ್ಲಿಯೂ ಮುಂದೆ ಎರಡು ವರ್ಷ

ಎಲ್‌ಎಲ್ ಬಿ ಪಾಸಾಗುವವರೆಗೆ ಮುಂಬಯಿಯಲ್ಲಿಯೂ ಕಾಲಕಳೆದೆನು ಇನ್ನುಮುಂದೆ ಈ ಅವಧಿಯಲ್ಲಿ ನನ್ನ ಸ್ವಂತಕ್ಕೆ ಸಂಬಂಧಪಟ್ಟ ಸಂಗತಿಗಳಕಡೆಗೆ ಹೊರಳುತ್ತೇನೆ

೧೮೯೯ನೆಯ ಇಸ್ವಿಯ ಜೂನ ತಿಂಗಳಲ್ಲಿ ಪರಾಂಜಪೆ ಯವರು ಇಂಗ್ಲಂಡದಲ್ಲಿ ರ್ಯಾಂಗಲರರಾದ ಸುದ್ದಿ ನಮಗೆ ಬಂದಿತು. ಅಂದು, ಫರ್ಗ್ಯೂಸನ ಕಾಲೇಜಿನಲ್ಲಿ ನಮ್ಮ ಆನಂದೋತ್ಸವ. ಆ ಉತ್ಸವದಲ್ಲಿ ನಾವು ಗೋಖಲೆ ಯವರು, ಪರೀಕ್ಷೆ ಪಾಸಾದರೆ ವಿದ್ಯಾರ್ಥಿಗಳ ಇತಿಕರ್ತ ವ್ಯತೆ ಮುಗಿಯಲಿಲ್ಲ, ಅವರ ನಿಜವಾದ ಪರೀಕ್ಷೆ ಅವರ ಮುಂದಿನ ಜೀವನದಲ್ಲಿ ಇದೆ, ದೇಶಸೇವೆ ಮಾಡಿದರೆ ಮಾತ್ರ ಜೀವನದ ಸಾರ್ಥಕ್ಯ, ಎಂದು ಮುಂತಾಗಿ ಉಪದೇಶಿ ಸಿದರು ಅದೇ ದಿವಸ, ನಾನೂ ನನ್ನ ಮಿತ್ರನಾದ ಕಾಶೀರಾಯನೂ ಕೂಡಿ, ಮುಂದೆ ಪತ್ರಿಕೆಯ ಸಂಪಾದಕ ರಾಗಬೇಕೆಂದು ನಿಶ್ಚಯಿಸಿದೆವು. ಆ ಪತ್ರಿಕೆಯ ಮೇಲ್ಗ ಡೆಗೆ ಹಾಕಲಿಕ್ಕೆ ಯಾವ ಶ್ಲೋಕವು ಯೋಗ್ಯವೆಂಬು ದನ್ನು ಎಂಟು ದಿವಸ ಹುಡುಕಿ ಆರಿಸಿದೆವು. ಆ ಶ್ಲೋಕವು ಇದು. ಇದು ಎಲ್ಲಿಯ ಶ್ಲೋಕವೆಂಬುದು ಈಗ ನೆನಪಿಗೆ ಬರಲೊಲ್ಲದು.

"ಭೂತಿರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯ ಕೋಲಾಹಲಃ। ನಾಶೋ ಹಂತ ಸತಾಮಸತ್ಪಥಜುಷಾ ಮಾಯುಃ ಸಮಾನಾಂ ಶತಂ॥ ದುರ್ನೀತಿಂ ತವ ವೀಕ್ಷ್ಯ ಕೋಪದಹನಜ್ವಾಲಾಜಟಾಲೋಽಪಿ ಸನ್। ಕಿಂ ಕುರ್ವೇ ಜಗದೀಶ ಯತ್ಪುನರಹಂ ದೀನೋ ಭವಾನೀಶ್ವರಃ॥

ದೇವರ ವಿಷಯಕ್ಕಿದ್ದ ಈ ಶ್ಲೋಕವನ್ನು ಸರಕಾರಕ್ಕೆ ಹಚ್ಚುವ ಉದ್ದೇಶದಿಂದ "ವಿಪ್ರಸದನ" ಎಂಬುದರ ಬದಲಾಗಿ "ಸಾಧುಸದನ" ಎಂಬುದನ್ನು ಹಾಕಬೇಕೆಂದು ಯೋಚಿಸಿದ್ದೆವು. ಆದರೆ, ಮುಂದೆ ನನ್ನ ಮಿತ್ರನ ಆಯುಷ್ಯಕ್ಕೆ ಭಿನ್ನದಿಸೆಯೇ ಹತ್ತಿತು ಆತನು ಫರ್ಸ್ಟ ಕ್ಲಾಸ ಮುನಿಸಿಫನಾಗಿ ಪೆನಶನ್ ತೆಗೆದುಕೊಂಡಿದ್ದಾನೆ; ಅರ್ಧಾಂಗವಾಯುವಿನಿಂದ ಹಾಸಿಗೆ ಹಿಡಿದು ಮಲಗಿದ್ದಾನೆ. ಇರಲಿ.

ನಮ್ಮ ಕಾಲೇಜದ ಪ್ರಖ್ಯಾತ ಪ್ರೊಫೆಸರರೆಂದರೆ ನಾಮದಾರ ಗೋಖಲೆ, ಭಾಟೆ, ಕರ್ವೆ, ರಾಜವಾಡೆ ಮುಂತಾದವರು ಪ್ರೊ ಭಾಟೆಯವರು ನನಗೆ ಬಿ. ಎ. ಕ್ಲಾಸಿನಲ್ಲಿ ನನ್ನ ಐಚ್ಛಿಕ ವಿಷಯವಾದ ತತ್ವಜ್ಞಾನವನ್ನು ಕಲಿಸುತ್ತಿದ್ದರಾದಕಾರಣ, ಅವರ ಪರಿಚಯವು ವಿಶೇಷವಾಯಿತು. ನಾಮ. ಗೋಖಲೆಯವರು ಪ್ರೀವಿಯಸದಲ್ಲಿ ನನಗೆ ಇತಿಹಾಸವನ್ನೂ ಇಂಟರದಲ್ಲಿ ಇಂಗ್ಲಿಷ ಗದ್ಯವನ್ನೂ ಬಿ. ಎ. ಕ್ಲಾಸಿನಲ್ಲಿ ಅರ್ಥಶಾಸ್ತ್ರವನ್ನೂ ಕಲಿಸಿದರು. ಪ್ರೊಫೆಸರ ಜನರಿಗೂ ನಮಗೂ ಸಂಬಂಧವು ವಿಶೇಷವಾಗಿರದ್ದರಿಂದಲೂ, ನಾನು ಮುಗ್ಧಸ್ವಭಾವವನಾದುದರಿಂದಲೂ, ಅವರ ವಿಚಾರಗಳ ಪರಿಣಾಮವು ನನ್ನಮೇಲೆ ಬಹಳ ಆಗಲಿಲ್ಲ ಮೇಲಾಗಿ ವಿದ್ಯಾರ್ಥಿಗಳ ಪ್ರೀತಿ ಟಿಳಕರಮೇಲೆ. ಟಿಳಕರಾದರೋ ಆ ಪ್ರೊಫೆಸರರಿಗೆ ಬರ್ಷಣ. ಪ್ರೊ. ಕರ್ವೆಯವರ ಸಾದಾತನಕ್ಕೂ ಸರಳತನಕ್ಕೂ ನನ್ನ ಮನವು ಮೆಚ್ಚಿತು. ನಾನು ಕಾಲೇಜಿನಲ್ಲಿದ್ದಾಗ, ಕರ್ವೆಯವರ ಒಬ್ಬ ಆಪ್ತಳೊಡನೆ ಪ್ರೊ. ಭಾಟೆಯವರ ಪುನರ್ವಿವಾಹ

ವಾಯಿತು. ಅಲ್ಲಿಯವರೆಗೆ ಭಾಟಿಯವರ ಉಡುಪು ತೊಡುಪುಗಳು ವಿಲಾಸವರ ರೀತಿ( Fashionable )ಯು ವಾಗಿದ್ದವು ಪುನರ್ವಿವಾಹವಾದ ಮರುದಿವಸ ನೋಡು ತ್ತೇನ, ಅವರು ತಮ್ಮ ಕ್ರಾಪನ್ನು ಕಿತ್ತು ಒಗೆದು, ಕರ್ವೆಯವರಂತೆಯೇ ಸಾದಾತನವನ್ನು ಸ್ವೀಕರಿಸಿದ್ದರು. ನಾವು ಒಮ್ಮೆ ಅವರಿಬ್ಬರಿಗೂ ನಮ್ಮ ಕ್ಲಬ್ಬಿನಲ್ಲಿ ಔತಣ ಮಾಡಿಸಿದೆವು. ಅವರು ಬಂದರು. ಆದರೆ ಅವರು ತಮ್ಮನ್ನು ಬೇರೆ ಪಙ್ಕ್ತಿಯಲ್ಲಿ ಕುಳ್ಳಿರಿಸಲಿಕ್ಕೆ ಹೇಳಿದರು. ಅದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಏಕೆಂದರೆ, ಕ್ಲಬ್ಬಿನಲ್ಲಿ ಆಗ, ಈ ವಿಷಯಕ್ಕೆ ಅಷ್ಟೊಂದು ವಿಧಿನಿಷೇಧ ಹಚ್ಚಿಕೊಳ್ಳುವವರು ವಿಶೇಷ ಜನರಿದ್ದಿಲ್ಲ. ಆದರೆ ಕರ್ವೆಯವರು ನಮಗೆ ಹೇಳಿದ್ದೇನೆಂದರೆ "ವಿದ್ಯಾರ್ಥಿ ಗಳು ಪ್ರೌಢವಯಸ್ಕರಾದ ಮಾತ್ರಕ್ಕೆ ಅವರ ವಿಚಾರಗಳೂ ಒಮ್ಮೆಲೆ ಪ್ರೌಢವಾಗುತ್ತವೆಂದಲ್ಲ ಅವು ತಾವಾಗಿಯೇ ಪರಿಪಕ್ವವಾಗುವವರೆಗೆ ನಾವು ಪ್ರೊಫೆಸರ ಜನರು ಹೀಗೆ ಗುರುತ್ವದ ಲಾಭವನ್ನು ತಗೆದುಕೊಳ್ಳುವುದು ಒಳಿತಲ್ಲ. ಈಗ ನೀವು ನಮ್ಮೊಡನೆ ಪಙ್ಕ್ತಿಗೆ ಕುಳಿತುಕೊಳ್ಳುವುದು ನಿಮ್ಮ ಸ್ವಂತ ಶ್ರದ್ಧೆ( Conviction )ಯಿಂದಲ್ಲ; ದಾಕ್ಷಿಣ್ಯ ಕ್ಕಾಗಿ. ಅದು ನಮಗೆ ಬೇಡ." ಈ ತರಹದ ಸರಳ ವರ್ತನದ ಮೂಲಕವೇ ಅವರು ಲೋಕಪ್ರಿಯರಾದರು. ಕಾಲೇಜ ಲಾಯಬ್ರರಿಯಲ್ಲಿ, ನಾನು ಒಮ್ಮೆ ಹ್ಯಾಗ್ಗರ್ಡ ( Haggard )ನ ನಾವ್ಹೆಲ್ಲುಗಳನ್ನು ಓದುತ್ತ ಕುಳಿತಿದ್ದೆ. ಪ್ರೊ. ರಾಜವಾಡೆಯವರು ಬಂದು, ಏನು ಓದುತ್ತೀ ಎಂದು ಕೇಳಿದರು. ಹ್ಯಾಗ್ಗರ್ಡನ ನಾವ್ಹೆಲ್ಲು ಅಂದೆ.

" What ? Haggard ? No No Dont read " ಎಂದು ನಿಕ್ಷುಣ್ಣಸ್ವರದಿಂದ ನುಡಿದರು. ಮೊದಲೇ ಕಥೆಗಳ ಕಡೆಗೆ ಒಲವಿಲ್ಲದ ಮುಂದೆ ನಾನು ಇಂದಿನವರೆಗೆ ಕಥೆಗಳನ್ನೇ ಸ್ವಸಂತೋಷದಿಂದ ಓದಿಲ್ಲ

ವಿನಾಯಕ ದಾಮೋದರ ಸಾವರಕರ ಇವರು ಮುಂಚೆ ಮರಾಠೀ ಕ್ಲಬ್ಬಿನಲ್ಲಿ ಊಟಮಾಡುತ್ತಿದ್ದರು ಒಂದು ಪ್ರಸಂಗದಲ್ಲಿ, ಅವರಿಗೂ ಅವರ ಮಿತ್ರರಿಗೂ ಮರಾಠೀ ಕ್ಲಬ್ಬನ್ನು ಬಿಡಬೇಕಾಯಿತು ಆಗ, ಅವರು ನಾಲ್ಕನೆಯ ಕ್ಲಬ್ಬಿಗೆ ಸುಪರಿಂಟೆಂಡೆಂಟನಾಗಿದ್ದ ನನ್ನ ಕಡೆಗ ಬಂದು ಕೇಳಿದರು ನಾನು ಅವರನ್ನೂ ಅವರ ಮಿತ್ರರನ್ನೂ ನನ್ನ ಕ್ಲಬ್ಬಿನಲ್ಲಿ ತೆಗೆದುಕೊಂಡೆ. ಆಗಿನಿಂದ ನನಗೂ ಅವರಿಗೂ ವಿಶೇಷ ಮೈತ್ರಿಯುಂಟಾಯಿತು ಅದಕ್ಕೂ ಕೆಲವು ವರ್ಷ ಪೂರ್ವದಿಂದಲೇ, ಅವರು ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಸಿದ್ಧರಾದ ಮಿತ್ರರದೊಂದು ಕೂಟವನ್ನು ಕಟ್ಟಿಕೊಂಡು ಕಾಲೇಜದ ಹತ್ತರವಿರುವ ಚತುಃಶೃಂಗೀ ಎಂಬ ಗುಡ್ಡದಮೇಲೆ ಗುಪ್ತ ಸಭೆಗಳನ್ನು ಮಾಡುತ್ತಿದ್ದರು. ಆ ಸಭೆಗಳಿಗೆ ನನ್ನ ಪ್ರವೇಶವಿದ್ದಿಲ್ಲ. ಪ್ರತಿನಿತ್ಯ ಅವರೂ ಅವರ ಮಿತ್ರರೂ ತಪ್ಪದೆ ಗರಡಿಸಾಧನೆ ಮಾಡುತ್ತಿದ್ದರು ೪೦೦-೫೦೦ ನಾಮುಗಳನ್ನು ಅವರು ತೆಗೆಯುವಾಗ ತೆಳ್ಳಗಿದ್ದ ನನ್ನ ಕೆಲಸವೆಂದರೆ, ಸಾವರಕರರ ಬೆನ್ನಮೇಲೆ ನಿಲ್ಲುವುದು. ಮುಂದೆ, ಅವರು ಇಂಗ್ಲಂಡಕ್ಕೆ ಹೋದಬಳಿಕ ಮಾತ್ರ, ನಾನು ಅವರ ಅನೇಕ ಕೆಲಸಗಳಲ್ಲಿ ಸಹಕಾರಿಯಾಗಿ ಕೆಲಸ ಮಾಡಿದೆ. ಆದರೆ, ಅವರ ಪ್ರತ್ಯಕ್ಷ ಭೆಟ್ಟಿಯು ಆದುದು

ಸುಮಾರು ೩೫-೩೬ ವರ್ಷಗಳ ನಂತರ ಅಂದರೆ ಅವರು
ಹೋದ ವರ್ಷ ಧಾರವಾಡಕ್ಕೆ ಬಂದಕಾಲಕ್ಕೆ, ಅವರ ಸ್ವಾಗತ
ಸಭೆಯ ಅಧ್ಯಕ್ಷನಾಗಿ ಅವರನ್ನು ಸತ್ಕರಿಸಿದಾಗ.

೧೯೦೨ನೆಯ ಇಸ್ವಿಯಲ್ಲಿ ನಾನು ಜೂನಿಯರ ಕ್ಲಾಸಿ
ನಲ್ಲಿದ್ದಾಗ ನಾನೂ ನನ್ನ ಮಿತ್ರರೂ ಒಮ್ಮೆ ಸಿಂಹಗಡ
ನೋಡಲಿಕ್ಕೆ ಹೋಗಿದ್ದೆವು. ಆಗ ಲೋ. ಟಿಳಕರು ಸಿಂಹ
ಗಡದಲ್ಲಿ ಇದ್ದರು. ಅವರನ್ನು ಕಾಣಬೇಕೆಂದು ನಮ್ಮೆ
ಲ್ಲರ ಇಚ್ಛೆ. ಆದರೆ ಯಾವ ನೆವದಿಂದ ಹೋಗಬೇಕು?
ಹುಬ್ಬಳ್ಳಿಯಲ್ಲಿ ಹೊಲಗಳನ್ನು ಒತ್ತೆಗೆ ಹಿಡಿದು ಸಾಲ
ಕೊಡುವುದೊಂದು ಯುರೋಪಿಯನ್ ಕಂಪನಿಯು (ಅದರ
ಹೆಸರು ಹಿರ್ಚ್‌ಕಿಲ್ Hi/kil ಇರಬಹುದೆಂದು ನೆನಪಿಗೆ
ಬರುತ್ತದೆ) ಹೊರಟ ಬಗ್ಗೆ ಕೇಸರಿ ಪತ್ರದಲ್ಲಿ ಜಾಹಿರಾತು
ಕೊಡಲ್ಪಡುತ್ತಿದ್ದುದನ್ನು ನಾನು ಓದಿದ್ದೆ. ಯುರೋಪಿ
ಯನ್ನರು ಈ ದೇಶದಲ್ಲಿ ಶಾಶ್ವತಭೂಮಿಯನ್ನು ಹಿಡಿದು
ವಾಸಮಾಡುವವರಲ್ಲವೆಂದು ಕೇಳಿದ್ದೆ. ಹೀಗೆ ಯುರೋಪಿ
ಯನ್ನರು ಹೊಲ ಹಿಡಿಯಹತ್ತಿದರೆ, ನಮ್ಮ ಸಾಹುಕಾರ
ರಿಗೆ ಗುಳೆಕಟ್ಟಿಕೊಂಡು ಹೋಗಬೇಕಾದೀತೆಂದು ನನ್ನ
ಅಂಜಿಕೆ. ಆದಕಾರಣ ಕೇಸರೀ ಪತ್ರದ ಪ್ರಕಟನೆ ನೋಡಿ
ನನಗೆ ಆಶ್ಚರ್ಯವಾಗಿತ್ತು. ಆ ಬಗ್ಗೆ, ನನಗೆ ಕೇಸರೀ
ಪತ್ರದಮೇಲೆ ಒಂದು ಆಕ್ಷೇಪ ಕೇಸರಿಯಂಥ ಸ್ವಾಭಿ
ಮಾನದ ಪತ್ರದಲ್ಲಿ ಇಂಥ ದೇಶದ್ರೋಹಿ ಜಾಹಿರಾತು
ಬರುವುದೆಂದರೇನು? ಭಯಂಕರವಾದ ಅಪರಾಧವೇ
ಅಲ್ಲವೇ? ಆ ಬಗ್ಗೆ ಟಿಳಕರನ್ನು ಕೈಹಿಡಿದು ಕೇಳಬೇಕೆಂದು

ನಿಶ್ಚಯಿಸಿ, ಆ ನಿವದಿಂದ ನಾನೂ ನನ್ನ ಮಿತ್ರರೂ ಸಿಂಹ ಗಡದಲ್ಲಿ ಅವರ ಕಡೆಗೆ ಹೋದೆವು. ಟಿಳಕರ ಬೆಟ್ಟಿಗೆ ಯಾವಾಗಲೂ ಎಲ್ಲರಿಗೂ ಮುಕ್ತದ್ವಾರ. ಔಪಚಾರಿಕ ವಿಧಿಗಳಾದಬಳಿಕ, ಅವರಮೇಲೆ ನಾನು ನನ್ನ ಆರೋಪ ವನ್ನಿಟ್ಟೆನು! ಅವರು ಅದರ ಕಡೆಗೆ ಲಕ್ಷ್ಯಹೋಗಿಲ್ಲವೆಂದೂ, ಜಾಹಿರಾತುಗಳು ತಮ್ಮ ಸಮ್ಮತಿಯಿಂದಲೇ ಮುದ್ರಿತ ವಾಗುತ್ತವೆಂದು ನಾನು ತಿಳಿಯಬಾರದೆಂದೂ ಹೇಳಿದರು. ನನಗೆ ಸಮಾಧಾನವಾಗಲಿಲ್ಲ ಸಮ್ಮತಿ ಇರಲಿ, ಬಿಡಲಿ, ಕೇಸರಿಯಂಥ ಪತ್ರದಲ್ಲಿ ಇಂಥ ಪ್ರಕಟನೆಗಳು ಬರುವುದ ರಿಂದ, ಅವಕ್ಕೆ ಟಿಳಕರ ಸಮ್ಮತಿಯಿರುತ್ತದೆಂದು ಜನರ ತಿಳುವಳಿಕೆಯಾಗುವ ಸಂಭವವಿತ್ತೆಂದೂ, ದೇಶದಲ್ಲಿ ಆಗ ನಡೆದಿರುವ ಲ್ಯಾಂಡರೆಪ್ಹಿನ್ಯೂಬಲ್ಲಿನ ಚಳವಳಿಯ ದಿವಸ ಗಳಲ್ಲಿ, ಇಂಥ ತಪ್ಪುತಿಳುವಳಿಕೆಗೆ ಅವಕಾಶ ಕೊಡಬಾರ ದೆಂದೂ ನಾನು ಅವರೊಡನೆ ವಾದಿಸಿದೆನು ಕೊನೆಗೆ ಅವರು ನಕ್ಕು, ಆ ಬಗ್ಗೆ ವಿಚಾರ ಮಾಡುವೆವೆಂದು ಹೇಳಿ ದರು. ನಾನು ಲೋಕಮಾನ್ಯರೊಡನೆ ಮಾತಾಡಿದ್ದು ಅದೇ ಮೊದಲನೆಯ ಬಾರಿ. ಅದಕ್ಕೂ ಮುಂಚೆ ಅವ ರನ್ನು ಅವರ ಮನೆಯಲ್ಲಿ ಆಗಾಗ ಕ್ಷಣಹೊತ್ತು ಕಾಣು ತ್ತಿದ್ದೆ. ಏಕೆಂದರೆ, ನನ್ನ ತಂದೆಯ ಸೋದರಮಾವನ ಮಕ್ಕಳಾದ ಸಣ್ಣಹಣಮಂತರಾಯರೆಂಬವರಿಗೂ ಟಿಳಕ ರಿಗೂ ಬಹಳ ಸ್ನೇಹ. ಅವರು ಟಿಳಕರ ಹತ್ತಿರವೇ ಇರುತ್ತಿದ್ದರು. ಅಲ್ಲಿಯೇ ತೀರಿಕೊಂಡರು. ಸಣ್ಣಹಣ ಮಂತರಾಯರು ಅತಿಶಯ ಕರ್ಮಠರಾದುದರಿಂದ, ಬೇರೆ ಮನೆಯಲ್ಲಿ ಸ್ವಂತ ಅಡಿಗೆಮಾಡಿಕೊಂಡು ಇರುತ್ತಿದ್ದರು.

ಮುಂದೆ ಒಂದು ಪ್ರಸಂಗದಲ್ಲಿ ಅವರ ಕಥೆಯು ಹೆಚ್ಚಿಗೆ ಬರುವುದಿದೆ

೧೯೦೩ನೆಯ ಇಸ್ವಿಯಲ್ಲಿ ನನ್ನ ಹೆಂಡತಿಗೆ ಜಡ್ಡು ಆಯಿತು. ಆಗ, ನಾನು ಬಿ ಎ. ಪರೀಕ್ಷೆಗೆ ಕೂಡುವವನಿದ್ದೆ. ಆದಕಾರಣ, ಆ ಸುದ್ದಿಯನ್ನು ಮೊದಲು ಅವಳು ನನಗೆ ತಿಳಿಸಲಿಲ್ಲ. ಕೆಲವು ದಿನಗಳ ನಂತರ, ನಾನು ಸಾವಕಾಶವಾಗಿ ಪರೀಕ್ಷೆಯನ್ನು ಮುಗಿಸಿಕೊಂಡು ಬರಬೇಕೆಂದೂ, ಬರುವಾಗ ಮಾತ್ರ, ಬಾಗಲಕೋಟೆಯಲ್ಲಿ ಅವಶ್ಯವಾಗಿ ಇಳಿಯಲೇಬೇಕೆಂದೂ ಅವಳಿಂದ ಪತ್ರ ಬಂದಿತು ಆಗ ನಮಗೆ ಇಂಗ್ಲಿಷ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬಾಯಿಪರೀಕ್ಷೆ ಸಹ ಕೊಡಬೇಕಾಗುತ್ತಿತ್ತು. ನನ್ನ ಕೆಳಗಿನ ನಂಬರು ಪಾಂಡೂ ಬಾಪಟ (ಈಗಿನ ಸೇನಾಪತಿ ಬಾಪಟ) ಇವನದಿತ್ತು. ಆತನೂ ನಾನೂ ಮುಂಚಿನಿಂದಲೂ ಸ್ನೇಹಿತರು. ಆತನು ತನಗೆ ಅತ್ಯವಶ್ಯದ ಕೆಲಸಕ್ಕಾಗಿ ಹೋಗಬೇಕಾದುದರಿಂದ, ಮುಂಚೆ ತಾನು ಬಾಯಿಪರೀಕ್ಷೆ ಒಪ್ಪಿಸಿ ಹೋಗುವನೆಂದೂ ಅದಕ್ಕೆ ನಾನು ಸಮ್ಮತಿಸಬೇಕೆಂದೂ ಕೇಳಿದನು. ನಾವಿಬ್ಬರೂ ಪರೀಕ್ಷಕರಿಗೆ, ಈ ಮಾತನ್ನು ಅರುಹಿದೆವು ಆ ಮೇರೆಗೆ ನನಗೆ ಮುಂಬಯಿಯಿಂದ ಹೊರಡಲಿಕ್ಕೆ ಒಂದು ದಿವಸ ತಡವಾಯಿತು. ಪರೀಕ್ಷೆ ಮುಗಿಸಿಕೊಂಡು ಬಾಗಲಕೋಟೆಗೆ ಹೊರಟೆ. ಮರುದಿವಸ ನಸುಕಿನಲ್ಲಿ ಸ್ಟೇಶನ್ನಿನಲ್ಲಿ ಇಳಿಯಬೇಕೆಂಬುವಷ್ಟರಲ್ಲಿ, ಮುಂಡೆವಾಡ್ಡಿ ಮುಂತಾದ ನನ್ನ ಮಿತ್ರರು, ನನ್ನ ಹೆಂಡತಿ ಅದೇ ಕೆಲವು ಗಂಟೆಗಳ ಮುಂಚೆ ತೀರಿಕೊಂಡಳೆಂದೂ ನಾನು ಅಲ್ಲಿ ಇಳಿಯುವ ಕಾರಣವಿಲ್ಲವೆಂದೂ ಹೇಳಿದರು!

೧೯೦೩ರಲ್ಲಿ ನಾನು ಆಲೂರಿನಲ್ಲಿದ್ದಾಗ, ಬಿ. ಎ. ಪರೀಕ್ಷೆ ೨ನೆಯ ವರ್ಗದಲ್ಲಿ ಪಾಸಾದ ಬಗ್ಗೆ ತಂತಿ ಬಂದಿತು. ನನಗೆ ಅರಭರವಸೆ ಅದು ನನ್ನ ಸ್ವಭಾವ. ತಪ್ಪಿ ಹಾಗೆ ತಂತಿ ಬಂದಿರಬಹುದೋ ಎಂದು ಸಂದೇಹ. ತಂತಿಮಾಡಿ ಕೇಳಿದೆ. ಅದಕ್ಕೂ ಅದೇ ಉತ್ತರ. ಮುಂದೆ ೧೯೦೪ನೆಯ ಇಸ್ವಿಯ ಪ್ರಾರಂಭಕ್ಕೆ 'ಲಾ' ಕ್ಲಾಸಿಗೆ ಹೋಗಬೇಕೆಂದು ಮುಂಬ ಯಿಗೆ ಹೊರಟೆ. ಅಪರಾತ್ರಿಯಲ್ಲಿ ಕಮಲಾಪುರ ಹಣಮು ಮುಂತಾದವರು ಪುಣೆಯ ಸ್ಟೇಶನ್ನಿಗೆ ಬಂದು, ನನಗೆ ಫೆಲೋಶಿಪ್ ಸಿಗುವ ಸಂಭವವಿರುವುದೆಂದು ಹೇಳಿ ನನ್ನನ್ನು ಇಳಿಸಿಕೊಂಡರು. ಇಳಿದೆ. ಪ್ರೊ. ಭಾಟೆಯವರಿಗೆ ಭೆಟ್ಟಿ ಯಾದೆ. "ನಂಬರೇನೋ ಬಂದಿದೆ; ಆದರೆ, ಕೆಲವು ನಂಬರು ಕೆಳಗೆ ಬಂದಿದ್ದರೂ ಕರ್ವೆ ಇವನು ಪ್ರೊ. ಕರ್ವೆ ಇವರ ಮಗನಾದ್ದರಿಂದ ಫೆಲೋಶಿಪ್ ಆತನಿಗೆ ಕೊಡಲ್ಪಡುವು ದೆಂದು ಹೇಳಿದರು. ಎಂ. ಎ. ಕಲಿತು ನಾನೂ ಪ್ರೊಫೆಸರ ನಾಗಬೇಕೆಂದು ಆಗ ಆಶೆ ಹುಟ್ಟಿತ್ತು. ಎಲ್ಎಲ್ ಬಿ. ಆದ ಬಳಿಕ ಎಂ.ಎ.ಪರೀಕ್ಷೆಗೆ ಕೂಡಬಹುದೆಂದು ನನ್ನ ಮಿತ್ರರು ಹೇಳಿದರು. ಆದರೆ ಮುಂದೆ ಎಂ. ಎ. ಪರೀಕ್ಷೆಗೆ ಕೂಡಲಿಲ್ಲ, ಬಿಡಲಿಲ್ಲ. ಕಾಲೇಜದಲ್ಲಿಯ ನನ್ನ ಗೆಳೆಯರಾದ ಭೀಮು ಧಿಟೆ, ರಾಘು ಮುಂಡೇವಾಡಿ, ಕೊಪ್ಪ ಸೀನು ಮುಂತಾ ದವರ ಅಪ್ಪಣೆ ತೆಗೆದುಕೊಂಡು ಮುಂಬಯಿಗೆ ಹೋದೆ.

೧೯೦೪-೧೯೦೫ರಲ್ಲಿ ನಾನು ಮುಂಬಯಿಯಲ್ಲಿ ಲಾ ಕಾಲೇಜಿನಲ್ಲಿ ಕಲಿತೆನು. ದೇಸಾಯಿ ಹನಮು, ಜ್ಹಾರಾರ ಬಾಳು, ಜೋಗ ವಿಶ್ವನಾಥ ಮುಂತಾದವರೂ ನಾವೂ, ಧಾರವಾಡದಿಂದ ಒಬ್ಬ ಅಡಿಗೆಯವನನ್ನು ಕರೆದೊಯ್ದು,

ಊಟದ ವ್ಯವಸ್ಥೆ ಮಾಡಿಕೊಂಡಿದ್ದೆವು. ಜೋಸಿ ನಾರಾಯಣರಾಯರೂ (ಅವರ ಆಗಿನ ಅಡ್ಡ ಹೆಸರು ಅಥಣಿ. ಮುಂದೆ ಅವರು ಮರಾಠಿಯಂತೆ ಕಾಣುವಂಥ'ಜೋಸಿ'ಎಂಬ ಈಗಿನ ಹೆಸರಿಗೆ ಅದನ್ನು ಬದಲಿಸಿಕೊಂಡರು) ನಾನೂ ಒಂದೇ ಕೋಣೆಯಲ್ಲಿ ಇದ್ದೆವು. ಅವರ ಸಂಬಂಧದ ಒಂದು ವಿಲಕ್ಷಣ ಸಂಗತಿ ಕೆಲವರಿಗೆ ಗೊತ್ತಿರಲಿಕ್ಕಿಲ್ಲ; ಅದನ್ನು ಹೇಳುವೆ. ಅವರು ಮುಂಬಯಿಯಲ್ಲಿ ವುಯಿಲ್ಸನ್ ಕಾಲೇಜದಲ್ಲಿ ಕಲಿಯುತ್ತಿದ್ದಾಗ, ದೇಶಪಾಂಡೆ ಎಂಬೊಬ್ಬ ಮರಾಠಿ ಸದ್ಗೃಹಸ್ಥರಿಗೆ, (ಅವರು ಮರೀನ ಖಾತೆಯಲ್ಲಿ ನೂರಾರು ರೂಪಾಯಿ ಸಂಬಳದ ಒಬ್ಬ ಹುಷಾರ ಅಧಿಕಾರಿಗಳು) ಅವರನ್ನು ಕಂಡ ಕೂಡಲೆ ತಮ್ಮ ಸತ್ತ ತಮ್ಮನನ್ನು ನೋಡಿದಂತಾಯಿತಂತೆ. ಕೂಡಲೆ ದೇಶಪಾಂಡೆಯವರು ತಾವಾಗಿಯೇ ನಾರಾಯಣರಾಯರ ಪರಿಚಯಮಾಡಿಕೊಂಡರು. ತಮ್ಮನಂತೆ ಅವರನ್ನು ಪ್ರೀತಿಸಹತ್ತಿದರು. ನಾರಾಯಣರಾಯರು ಊರಿಗೆ ಹೋಗುವಾಗ ಸ್ಟೇಶನ್ನಕ್ಕೆ ಕಳುಹಿಸಿ ಅವರಿಗೂ ಅವರ ಮನೆಯವರಿಗೂ ಉಡುಗರೆಗಳನ್ನು ಜುಲುಮೆಯಿಂದ ಕೊಟ್ಟು ಹೋಗುತ್ತಿದ್ದರು. ನಾನೂ ನಾರಾಯಣರಾಯರೂ ಒಂದೇ ಕೋಣೆಯಲ್ಲಿದ್ದಾಗ, ಮೇಲಿಂದ ಮೇಲೆ ನಮ್ಮ ಕೋಣೆಗೆ ಬಂದು ನಮ್ಮೊಡನೆ ಹರಟೆ ಹೊಡೆದು ಹೋಗುತ್ತಿದ್ದರು. ಬಹುಶಃ ಆದಿತ್ಯವಾರಕ್ಕೊಮ್ಮೆ ನಮ್ಮಿಬ್ಬರಿಗೂ ಮೇಲಿಂದ ಮೇಲೆ ಔತಣ. ಅವರು ನಾರಾಯಣರಾಯರೊಡನೆ ಎಂದೂ ವಿಶೇಷ ಮಾತಾಡುತ್ತಿರಲಿಲ್ಲ. ಆದರೆ ಅವರನ್ನು ನೋಡದೆ ಅವರಿಗೆ ಊಟ ಹೋಗುತ್ತಿರಲಿಲ್ಲ. ಪೂರ್ವಜನ್ಮದ ಸಂಸ್ಕಾರದ

ಹೊರತು ಮತ್ತಾವ ರೀತಿಯಿಂದಲೂ ಈ ನಿರ್ವ್ಯಾಜ ಪ್ರೇಮಕ್ಕೆ ಅರ್ಥವಾಗುವಂತಿಲ್ಲ.

೧೯೦೪ನೆಯ ಇಸ್ವಿಯಲ್ಲಿ ದೇವಧರ ಎಂಬವರು ಮುಂಬೈಯಲ್ಲಿ ಗ್ರ್ಯಾಜುಏಟ್ಸ ಅಸೋಸಿಯೇಶನ್ ಪ್ರಾರಂಭ ಮಾಡಿದರು. ಪ್ರಾರಂಭೋತ್ಸವಕ್ಕೆ ನಾ. ಗೋಖಲೆಯವ ರನ್ನು ಕರೆಸಿದ್ದರು. ನಾನೂ ಹೋದೆ. ದೇವಧರ ಇವರಿಗೆ ದೇಶಸೇವೆಯನ್ನು ಹೇಗೆ ಮಾಡಬೇಕೆಂಬ ಬಗ್ಗೆ, ಗೋಖಲೆಯವರ ಉಪದೇಶ ಬೇಕಾಗಿತ್ತು. ನನಗೂ ಆ ಬಗ್ಗೆ ಕುತೂಹಲ. ಏಕೆಂದರೆ, ನನಗೂ ಯಾವುದೊಂದು ತರಹದ ಸೇವೆ ಕೈಕೊಳ್ಳಬೇಕೆಂಬ ವಿಚಾರ ನಡುನಡುವೆ ಮಿಂಚುತ್ತಿತ್ತು, ಮಾಯವಾಗುತ್ತಿತ್ತು; ಪುನಃ ಮಿಂಚು ತ್ತಿತ್ತು, ಪುನಃ ಮಾಯವಾಗುತ್ತಿತ್ತು. ಅವರು ನಮಗೆ ಕಾಯದೆ ಕೌನ್ಸಿಲ ಮೆಂಬರರಾಗುವುದಕ್ಕಾಗಲಿ, ಸಂಪಾದಕ ರಾಗುವುದಕ್ಕಾಗಲಿ ಇವೇ ಮುಂತಾದ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡುವುದಕ್ಕೆ ಉಪದೇಶಿಸಬಹುದೆಂದು ನಾನು ಭಾವಿಸಿದ್ದೆ. ಆದರೆ ಆ ತರಹದ ಉಪದೇಶ ಅವರು ಮಾಡಲಿಲ್ಲ. ದೇಶಸೇವೆಯ ಮೊದಲನೆಯ ಪಾಠೆಂದರೆ ಗ್ರಂಥಾಲಯಗಳಲ್ಲಿಯ ಪುಸ್ತಕಗಳ ಮೇಲಿನ ಧೂಳನ್ನು ಜಾಡಿಸಿ ಸ್ವಚ್ಛಮಾಡುವುದು ಎಂದು ಹೇಳಿದರು. ಅಲ್ಲಿಯ ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಗ್ರಂಥಗಳ ಮೇಲೆ ಧೂಳು ಮುಸುಕಿದೆ, ಅದನ್ನು ತೆಗೆಯುವವರಿಲ್ಲ, ಓದುವವರಂತೂ ಒತ್ತಟ್ಟಿಗೆ ಎಂದೂ ಹಾಗೆ ಧೂಳ ಜಾಡಿಸ ಹತ್ತಿದರೆ ಓದುವ ಕುತೂಹಲವುಂಟಾಗುತ್ತದೆಂದೂ ಅವರು ಹೇಳಿದ್ದು ನನ್ನ ಮನಸ್ಸಿನಲ್ಲಿ ಒಳಿತಾಗಿ ನೆಟ್ಟಿತು. ದೇವ

ಧರ ಇವರು ಆ ಪ್ರಕಾರ ಮಾಡಿದರೋ ಇಲ್ಲವೋ ಗೊತ್ತಿಲ್ಲ. ನಾನು ಅಲ್ಲಿ ಹಾಗೆ ಮಾಡಲಿಲ್ಲವಾದರೂ ೧೯೦೫ರಲ್ಲಿ ವಕೀಲನಾಗಿ ಧಾರವಾಡಕ್ಕೆ ಬಂದ ಬಳಿಕ, ನಾನು ಮುಂಚೆ ಕೈಕೊಂಡದ್ದು ಆ ಕೆಲಸ. ಕರ್ನಾಟಕ ವಿದ್ಯಾವರ್ಧಕ ಸಂಘದ ಗ್ರಂಥಾಲಯದ ಪುಸ್ತಕಗಳ ಮೇಲೂ ಹಿಂಗೆಯೇ ಧೂಳ ಕೂತಿತ್ತು. ಒರಸಿ ವರ್ಗೀಕರಣ ಮಾಡಿದ. ನೇಟಿವ್ ಜನರಲ್ ಲಾಯಬ್ರರಿಯ ಪುಸ್ತಕಗಳಂತೂ ದಿಕ್ಕಾಪಾಲಾಗಿ ಬಿದ್ದಿದ್ದವು ಲಾಯಬ್ರರಿಯು ನಿಂತುಹೋಗಿತ್ತು. ನಾನು ಅವೆಲ್ಲವನ್ನೂ ಸರಿಪಡಿಸಿ, ಅವುಗಳ ಮೇಲೆ ಟಾಯಿಪ ಮಾಡಿದ ನಂಬರುಗಳನ್ನು ಅಂಟಿಸಿದೆ. ಲಾಯಬ್ರರಿಯನ್ನು ಪ್ರಾರಂಭ ಮಾಡಿಸಿ, ಕಾರ್ಯದರ್ಶಿಗಳೇ ಮುಂತಾದವರನ್ನು ನೇಮಿಸಿ, ಹಿಂದಕ್ಕೆ ಸರಿದೆ. ಮುಂದೆ ಒಂದೆರಡು ವರ್ಷಗಳ ಮೇಲೆ, ಶ್ರೀಶಂಕರಾಚಾರ್ಯರ ಪಾಠಶಾಲೆಯ ಗ್ರಂಥಗಳ ಮೇಲಿನ ಧೂಳ ಜಾಡಿಸಿ, ವರ್ಗೀಕರಣ ಮಾಡಿ ಅವುಗಳಿಗೂ ಟಾಯಿಪ ಮಾಡಿದ ನಂಬರುಗಳನ್ನು ಅಂಟಿಸಿದೆ.

ಇನ್ನು, ಈ ಅವಧಿಯಲ್ಲಿ, ನಾನು ಇತ್ತ ನಮ್ಮ ದೇಶದಲ್ಲಿದ್ದಾಗಿನ ಕೆಲವು ನೆನಪಿನ ಚುಟುಕೆಗಳನ್ನು ಕೊಡುವೆ. ೧೮೯೯-೧೯೦೦ರಲ್ಲಿ ಮುದ್ದೇಬಿಹಾಳದಲ್ಲಿ ಇದ್ದಾಗಿನ ಒಂದು ಚುಟಿಕೆ ನೆನಪಿಗೆ ಬರುತ್ತದೆ. ಹರಕಾರ ಎಂಬವನೊಬ್ಬ ವಿಕ್ಷಿಪ್ತ ವ್ಯಕ್ತಿ; ಸ್ಕೂಲಫಾಯನಲ್ ಪಾಸಾದವ; ಜಾಣ, ಧೈರ್ಯವಂತ, ದೇಶಸೇವಾತತ್ಪರ, ವಿಶೇಷತಃ ಚಳವಳಿಗಾರ. ದುಷ್ಕಾಳದಲ್ಲಿ ಬಡಜನರು ಕೂಳಿಲ್ಲದೆ ಸಾಯುವುದನ್ನು ನೋಡಿ, ಆತನ ಮನವು ಮರುಗಿತು. ಫ್ಯಾಮಿನ್ ಕೋಡಿನಲ್ಲಿ ಮಾಮಲೇದಾರರೇ ಮುಂತಾದವರ ದುರ್ಲಕ್ಷ್ಯದ

ಮೂಲಕ ಜನರು ಸತ್ತರೆ, ಆ ಕೊಲೆಗೆ ಅಧಿಕಾರಿಗಳು ಹೊಣೆ
ಗಾರರೆಂದು ಇರುವುದಂತೆ. ಅದನ್ನು ಓದಿ, ಮಾಮಲೇ
ದಾರನು ಕೊಲೆಮಾಡಿದ್ದಾನೆ ಎಂದು ಕಲೆಕ್ಟರ ಮೊದ
ಲ್ಗೊಂಡು ವ್ಹಾಯಿಸರಾಯರವರೆಗೆ ತಂತಿ ಕೊಟ್ಟ ಕೂಡಲೆ
ಗದ್ದಲವೇ ಗದ್ದಲ. ಆದರೆ, ಮುಂದೆ ಆತನ ವಿಕ್ಷಿಪ್ತ
ತನವು ಗೊತ್ತಾದ್ದರಿಂದ, ಆತನ ನ್ಯಾಯದ ಅರ್ಜಿಗಳು
ಕೂಡ ಅನ್ಯಾಯವಾಗಿ ಕಸದ ಬುಟ್ಟಿಯಲ್ಲಿ ಬೀಳಹತ್ತಿದವು.

೧೯೦೧ರಲ್ಲಿ ವಿಜಾಪುರದಲ್ಲಿದ್ದಾಗ ನೋಡಿದ ಒಂದು
ವಿಲಕ್ಷಣ ಸಂಗತಿ ಹೇಳುವೆ. ಪ್ಲೇಗಿನ ಮೂಲಕ ಕಾಲೇಜು
ತೀವ್ರ ಬಂದಾದ್ದರಿಂದ ರೊದ್ದ ವ್ಯಾಸರಾಯ (ನನ್ನ ತಮ್ಮ
ನಾನಾನ ಹೆಂಡತಿಯ ಅಣ್ಣ)ನೂ ನಾನೂ ವಿಜಾ
ಪುರಕ್ಕೆ ನಮ್ಮ ಮನೆಗೆ ಬಂದೆವು ಆ ಊರಲ್ಲಿ ವೆಂಕಣ್ಣಾ
ಕುಲಕರ್ಣಿ ಎಂಬೊಬ್ಬ ಹುಂಬ ಹುಡುಗ. ಚಿಕ್ಕವನಿರು
ವಾಗ ಆತನಿಗೆ ಒಬ್ಬ ಬಾವಾಜಿಯು ಭೆಟ್ಟಿಯಾಗಿದ್ದನಂತೆ.
ಆತನಿಗೆ ಏನೇನೋ ಉಪದೇಶಿಸಿದ್ದನಂತೆ. ಅಂದಿನಿಂದ
ಆತನು ಜನರು ಬೇಡಿದ್ದನ್ನು ಅಲ್ಲಿಂದಲ್ಲಿಯೇ ಹುಟ್ಟಿಸಿ
ಕೊಡುತ್ತಿದ್ದನು. ಪೋಲೀಸ ಶಿಪಾಯರು ಚೌಕಿಗಳಲ್ಲಿ
ಆವನಿಂದ ಮೇಲಿಂದಮೇಲೆ ಹೀಗೆ ಚಹ ಹುಟ್ಟಿಸಿಕೊಂಡು
ಕುಡಿಯುತ್ತಿದ್ದರು, ಫರಾಳ ತಿನ್ನುತ್ತಿದ್ದರು. ಈ ಸುದ್ದಿ
ಊರತುಂಬೆಲ್ಲ ದಟ್ಟವಾಗಿ ಹಬ್ಬಿತು. ಅರ್ಥಾತ್ ನಾವು
ಅದನ್ನು ನಗೆಚಾಟಿಕೆಯಾಗಿ ತಿಳಿದೆವು. ರೊದ್ದ ವ್ಯಾಸ
ರಾಯ ತೀರ ಸುಧಾರಕ. ಆತನಿಗೆ ದೇವರು ದೆವ್ವಗಳಲ್ಲಿ
ಏನೂ ವಿಶ್ವಾಸವಿದ್ದಿಲ್ಲ. ಆತನ ಮುಂದೆ ಅನೇಕ ಮಿತ್ರರು
ಈ ವಾರ್ತೆ ತಿಳಿಸಿದರು. ಆತನೂ ನಾನೂ ಆ ಸಂಗತಿಯನ್ನು

ಪರೀಕ್ಷಿಸಬೇಕೆಂದು ಗೊತ್ತಾಯಿತು. ಆ ಮೇರೆಗೆ ನಾವು ಒಂದು ಮನೆಗೆ ವೆಂಕಣ್ಣನನ್ನು ಕರಸಿದೆವು ಕಲ್ಲೊಳ್ಳಿ ಎಂಬ ಲಿಂಗಾಯತ ಡೆಪ್ಯೂಟಿ ಕಲೆಕ್ಟರರೇ ಮುಂತಾದ ವರು ಬಂದಿದ್ದರು ವ್ಯಾಸರಾಯನನ್ನೂ ಆ ವೆಂಕಣ್ಣನನ್ನೂ ಒಂದು ಕಡೆಗೆ ಕುಳ್ಳಿರಿಸಿ ಅವರಿಬ್ಬರ ಮೇಲೆ ನಾನು ಒಂದು ಕಂಬಳಿ ಮುಸುಕು ಹಾಕಿದೆ ವ್ಯಾಸರಾಯನು ಬಿಸಿಬಿಸಿ ಚಹ ಕೊಡಲಿಕ್ಕೆ ಹೇಳಿದ. ಆ ಪ್ರಕಾರ ೨-೩ ಬಿಸಿ ಚಹದ ಕಪ್ಪುಗಳನ್ನು ಕೊಟ್ಟ, ಸಕ್ಕರಿ ತೆಗೆದು ಕೊಟ್ಟ ನಾವೆಲ್ಲರೂ ತಿಂದೆವು ಎಲ್ಲರೂ ಬೆಪ್ಪಾದೆವು ವ್ಯಾಸರಾಯನೂ ಬೆಪ್ಪಾದ. ಆದರೂ, ಏನೋ ಗೌಡಬಂಗಾಲವಿದ್ದಿರಬಹುದೆಂದು ಅಂದನು. ಬೇಕಾದಷ್ಟು ಸಲ, ಪರೀಕ್ಷಿಸಬಹುದೆಂದು ಹೇಳಿತು ಮತ್ತೆ ೨-೩ ಸಲ, ಪರೀಕ್ಷಿಸಿದನು ಏನೂ ಹೊಳೆಯಲಿಲ್ಲ ಆಗ, ನಾನೂ ಆತನೂ ಕೂಡಿ, ಒಂದು ಲೇಖ ಬರೆದು ಮುಂಬಯಿ ಟಾಯಿಮ್ಸ್ ಪತ್ರಿಕೆಗೂ ಮದ್ರಾಸಿನ ಹಿಂದೂ ಪತ್ರಿಕೆಗೂ ಕಳಿಸಿಕೊಟ್ಟೆವು ಆ್ಯನಿಬೆಝಂಟ ಇವಳಿಗೂ ಒಂದು ಪತ್ರ ಬರೆದೆವು. ಅವಳು, ಇಂಥ ಸಂಗತಿಗಳು ಸಂಭವಿಸುವುದು ಅಶಕ್ಯವೇನೂ ಅಲ್ಲವೆಂದು ಉತ್ತರ ಬರೆದಳು.

ಇಂಡಿಯಲ್ಲಿದ್ದಾಗ ೧೯೨೧ನೆಯ ಇಸ್ವಿಯ ಮೇ ತಿಂಗಳ ರಜೆಯಲ್ಲಿ ಸಂಭವಿಸಿದ ಒಂದು ಸಂಗತಿ ಹೇಳುವೆ. ಅದು ಅಗರಖೇಡದ ಆದ್ಯ ಶೇಷದಾಸಾಚಾರ್ಯರ ಪುನರ್ವಿವಾಹಕ್ಕೆ ಸಂಬಂಧಿಸಿದ್ದು. ಶೇಷದಾಸಾಚಾರ್ಯರು ಘನ ಪಂಡಿತರು. ಅವರ ಮನೆತನದವರಲ್ಲಿ ಪಾಂಡಿತ್ಯವು ಆನುವಂಶಿಕ ಸಂಸ್ಕಾರದಿಂದ ಬಂದುದು. ಮಧ್ವಸಿದ್ಧಾಂತದಲ್ಲಿ ಅವರಿಗೆ ಅಚಲಶ್ರದ್ಧೆ. ತತ್ವಪ್ರಕಾಶವೇ ಮುಂತಾದ

ಗ್ರಂಥಗಳನ್ನು ಭಾಷಾಂತರಿಸಿ ಮುದ್ರಿಸುತ್ತಿದ್ದರು; ಇಂಗ್ಲಿಷ ಕಲಿತವರಲ್ಲ ಆದರೂ ಕಟ್ಟಾ ಸುಧಾರಕರು ಮತ್ತು ಸ್ವತಂತ್ರ ವಿಚಾರದವರು; ಮತ್ತು ಅನಂತ ನಡೆಯುವ ಧೈರ್ಯವುಳ್ಳವರು ಅವರು ತಾಲೂಕು ಲೋಕಲ್ ಬೋರ್ಡಿನ ಮೆಂಬರರೂ ಆಗಿದ್ದರು ಅವರು ಇಂಡಿಯ ಹೆಣ್ಣುಮಕ್ಕಳ ಶಾಲೆಯ ತಪಾಸಿಗೆ ಬಂದಾಗ, ಅಲ್ಲಿ ಮಿಸ್ಟ್ರೆಸ್ ಆಗಿದ್ದ ಲಕ್ಷ್ಮೀಬಾಯಿ ಎಂಬ ಬ್ರಾಹ್ಮಣ ವಿಧವೆಯ ಮೇಲೆ ಅವರ ಕಣ್ಣು ಕೂತಿತು ಅವರನ್ನು ಲಗ್ನಮಾಡಿ ಕೊಳ್ಳಬೇಕೆಂದು ಕೇಶವದಾಸಾಚಾರ್ಯರು ಅವರ ಮನಸ್ಸು ಒಲಿಸಹತ್ತಿದರು ಪ್ರೇಮಯಾಚನೆ ( Wooing ) ನಡಯಿತು. ಅವರು ಒಮ್ಮೆಲೆ ಒಪ್ಪಲಿಲ್ಲ ಏಕೆಂದರೆ ದಾಸರಿಗೆ ಹೆಂಡತಿ, ಮಗ ಇದ್ದರು ದಾಸರು ಕವಿಗಳು, ಅವರು ಪದ್ಯರೂಪದಿಂದ ಪ್ರೇಮಪತ್ರ ಬರೆಯುತ್ತಿದ್ದರು ಮಿಸ್ಟ್ರೆಸಿನ ತಾಯಿಯು ಅಲ್ಲಿಯ ಹೆಡ್‌ಮಾಸ್ತರರಿಗೂ ನನಗೂ ಕೆಲವು ಪತ್ರಗಳನ್ನು ತೋರಿಸಿ ವ್ಯವಹಾರ ವಿಷಯದಲ್ಲಿ ಹೆಡ್‌ಮಾಸ್ತರರ ಸಲಹೆ ಪಡೆಯುತ್ತಿದ್ದಳು. ಆ ಮಿಸ್ಟ್ರೆಸರು ಮುಂಚೆ ಒಪ್ಪಿ, ಒಲ್ಲೆಂದಾಗ “ದಾಸನಾದ ಕೇಶವದಾಸನು ಈಗ ಬೇಸರಾದನೇನೇ” ಎಂದು ಬರೆದದ್ದು ಇನ್ನೂ ನೆನಪಿನಲ್ಲಿ ಇದೆ. ಮುಂದೆ ತೀವ್ರವೇ ಅವರ ಪುನರ್ವಿವಾಹವಾಯಿತು. ನಮ್ಮ ಬೀಗ ದೊಡ್ಡ ವ್ಯಾಸರಾಯನಿಗೆ ಆಗ ಬಹಳ ಆನಂದ. ಆತನು ಅವರೀರ್ವರ ಭೆಟ್ಟಿಗಾಗಿ ಇಂಡಿಗೆ ಬಂದನು. ನಾನೂ ಆತನೂ ಕೂಡಿ ಬಂಡಿಯ ಮೇಲೆ ಅಗರಖೇಡಕ್ಕೆ ಹೋದೆವು. ಆ ದಂಪತಿಗಳಿಂದ ಆದರ ಸತ್ಕಾರ ಸ್ವೀಕರಿಸಿದೆವು. ಅವರಿಬ್ಬರ ತತ್ವನಿಷ್ಠೆ, ಸರಳ

ಜೀವನ ಇವು ನಮ್ಮ ಮನಸವನ್ನು ಆಕರ್ಷಿಸಿದವು ಹೆಂಡತಿ ಮಗನು ಜೀವಂತವಿರಲು ಹೀಗೆ ಪುನರ್ವಿವಾಹ ಮಾಡಿಕೊಳ್ಳುವುದು ಉಚಿತವೇ ಎಂಬುದೊಂದು ಸಂಗತಿಯನ್ನು ಮಾತ್ರ ಸಮರ್ಥಿಕೊಳ್ಳುವುದು ಅವರಿಂದಾಗಲಿಲ್ಲ ಉತ್ತರ ಕರ್ನಾಟಕದಲ್ಲಿ ಇದೇ ಆದ್ಯ ಪುನರ್ವಿವಾಹ

ನನ್ನ ತಂದೆಯವರು ಸರಕಾರೀ ನವಕರಿಯಲ್ಲಿದ್ದರೂ ಅದರ ಮೇಲೆ ಅವರ ಪ್ರೇಮವಿರಲಿಲ್ಲ, ಇಷ್ಟೇ ಅಲ್ಲ, ಆ ಸಂಬಂಧವಾಗಿ ಅವರಲ್ಲಿ ಜಿಗುಪ್ಸೆಯೂ ಇತ್ತು. ಆದ ಕಾರಣ, ಅವರು ತಮ್ಮ ನಾಲ್ಕು ಮಕ್ಕಳನ್ನು ಸ್ವತಂತ್ರ ಉದ್ಯೋಗಗಳಲ್ಲಿಯೇ ತೊಡಗಿಸಬೇಕೆಂದು ಮುಂಚಿನಿಂದಲೂ ನಿರ್ಧರಿಸಿದಂತೆ ತೋರುತ್ತದೆ. ಏಕೆಂದರೆ, ಆಗಿನ ಸರಕಾರೀ ಅಧಿಕಾರಿಗಳ ಪದ್ಧತಿಯಂತೆ, ಶಾಲೆಯಲ್ಲಿ ನಮ್ಮ ವಯಸ್ಸು ಕಡಿಮೆ ಹಚ್ಚಲಿಲ್ಲ ನಾನು ವಕೀಲನಾಗಬೇಕೆಂದೂ ನನ್ನ ತಮ್ಮ ನಾನಾ (ಸೊಲ್ಲಾಪೂರದಲ್ಲಿಯ ನನ್ನ ತಾಯಿಯ ಮನೆತನದಿಂದ 'ನಾನಾ' ಎಂಬ ರೂಢಿ ಬಂದದ್ದು) ಇವನು ಡಾಕ್ಟರನಾಗಬೇಕೆಂದೂ ರಾಮೂ ಇವನು ವ್ಯಾಪಾರಿಯೂ ಲಕ್ಷ್ಮಣನು ಕಮತಿಗನೂ ಆಗಬೇಕೆಂದೂ ಅವರ ನಿರ್ಧಾರ ಬಹಳ ಕಲಿಸಿದರೆ ವ್ಯಾಪಾರ ಮತ್ತು ಒಕ್ಕಲತನ ಮಾಡುವುದಕ್ಕೆ ನಾಚುವರೆಂದು ತಿಳಿದು ರಾಮೂ ಮತ್ತು ಲಕ್ಷ್ಮಣ ಇವರಿಗೆ ಮ್ಯಾಟ್ರಿಕ್‌ದ ವರೆಗೆ ಕಲಿಸಿ ಶಾಲೆ ಬಿಡಿಸಿಬಿಟ್ಟರು. ಹೆಣ್ಣು ಕೊಡುವವರಿಗೆಲ್ಲ ಹಾಗೆ ಸ್ವಚ್ಛವಾಗಿ ಹೇಳಿದರು. ನಾನಾ ಈತನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ೧।೨ ಸಲ ನಾಪಾಸಾದಕಾರಣ ಆತನನ್ನು ದಲಾಲಿ ವ್ಯಾಪಾರದಲ್ಲಿ ತೊಡಕಿಸಿದರು

ರಾವೂ ಇವನು ಜವಳಿ ಅಂಗಡಿ ಹಾಕಿದನು; ಲಕ್ಷ್ಮ
ಣನು ಕಮತಿಗನಾದನು. ೧೫-೨೦ ವರುಷ ನಡಿಸಿ
ಅವರು ಸತ್ತರು ಮುಂದೆ ನಡಿಸಲಿಕ್ಕೆ ಅವರಿಗೆ ಪ್ರೌಢ
ಮಕ್ಕಳಿಲ್ಲದಕಾರಣ, ಅವೆಲ್ಲವೂ ಮೂಲೆಗುಂಪಾದವು.
ಆಗ ಸ್ವತಂತ್ರ ಉದ್ಯೋಗಗಳು ವಂಶಪರಂಪರೆಯಾಗಿ
ನಡೆದುಬರುವುದರ ಮಹತ್ವವು ಗೊತ್ತಾಗಿ ಜಾತಿಗಳು ವಂಶ
ಪರಂಪರೆಯಾಗುವುದು ಏಕೆ ಮತ್ತು ಎಷ್ಟು ಅವಶ್ಯಕ
ವಿರುತ್ತದೆಂಬುದು ಚೆನ್ನಾಗಿಯೇ ಅನುಭವಕ್ಕೆ ಬಂದಿತು
ಇರಲಿ, ಇದೆಲ್ಲ ಮುಂದಿನ ಮಾತು ಪ್ರಸ್ತುತ ೧೯೦೩
ನೆಯ ಇಸ್ವಿಯಲ್ಲಿ ನಮ್ಮ ತಂದೆಯವರು ಪೆನ್‌ಶನ್
ತೆಗೆದುಕೊಂಡರು. ಆ ವರುಷ ನಾನು ಬಿ ಎ ದಲ್ಲಿ
ಇದ್ದೆ. ಒಂದು ವರುಷ ನವಕರಿ ಮುದ್ದತು ಬೆಳಿಸಿ,
ನನ್ನನ್ನು ನವಕರಿಯಲ್ಲಿ ತೊಡಕಿಸಿದ ಬಳಿಕ ಪೆನ್‌ಶನ್
ತೆಗೆದುಕೊಳ್ಳಬೇಕೆಂದು, ನನ್ನ ಮಾವಂದಿರಾದ ಮಂಗಳ
ವೇಡೆ ಶ್ಯಾಮರಾಯರಿಂದ ಇಂಡಿಗೆ ಆಗ್ರಹದ ಪತ್ರ
ಬಂದಿತು. ಅವರು ಸ್ವತಃ ಪೆನಶನ ಮಾಮಲೇದಾರರು
ಮಂಗಳವೇಡೆಕರ ಮನೆತನವು ದೊಡ್ಡದೊಡ್ಡ ನವಕರಿ
ಮಾಡಿದವರ, ಮಾಡುವವರ ಮನೆತನ. ನನ್ನ ಮಕ್ಕ
ಳನ್ನು ನವಕರಿಯಲ್ಲಿ ಸೇರಿಸುವುದು ನನ್ನ ಇಚ್ಛೆ ಇಲ್ಲ
ವೆಂದು ಸ್ಪಷ್ಟವಾಗಿ ತಿಳಿಸಿ, ಇನ್ನೂ ವಯಸ್ಸು ಮೀರದ್ದ
ರಿಂದ ಪೆನಶನ್ ತೆಗೆದುಕೊಳ್ಳುವುದೂ ಬಿಡುವುದೂ ಅವರ
ಇಚ್ಛೆಯಮೇಲೆ ಇದ್ದರೂ ಪೆನಶನ್ ತೆಗೆದುಕೊಂಡೇ
ಬಿಟ್ಟರು. ಆದರೆ, ನನಗೆ ಆಗ ಆ ಬಗ್ಗೆ ಯಾವ ನಿಶ್ಚಿತ
ಅಭಿಪ್ರಾಯವೂ ಇದ್ದಿಲ್ಲ. ಎಂ. ಎ., ಎಲ್‌ಎಲ್. ಬಿ.

ಆಗುವವರೆಗೆ ಕಲಿಯಬೇಕೆಂದು ಮಾತ್ರ ಇಚ್ಛೆ ಇತ್ತು. ಪೆನಶನ್ ತೆಗೆದುಕೊಂಡು, ಆಲೂರಲ್ಲಿ ಇರಹತ್ತಿದಾಗ ವ್ಹಿಲೇಜ ಮುನಸಿಫ್, ಆನರರಿ ಮ್ಯಾಜಿಸ್ಟ್ರೇಟರಾಗಲಿಕ್ಕೂ ನಮ್ಮ ತಂದೆಯವರಿಗೆ ಕೇಳಿಕೆ ಬಂದವು ರಾಮದುರ್ಗದ ಕಾರಭಾರಿಯಾಗುವ ಸಂಧಿಯೂ ಪ್ರಾಪ್ತವಾಗಿತ್ತು. ಅವೆಲ್ಲ ವನ್ನೂ ಅವರು ನಿರಾಕರಿಸಿದರು. ಧಾರವಾಡಕ್ಕೆ ಬಂದು ಮಕ್ಕಳ ಕಡೆಯಿಂದ ಅಂಗಡಿಗಳನ್ನು ತೆಗೆಸಿದರು.

ಇಂಡಿಯಲ್ಲಿದ್ದಾಗ ಅಲ್ಲಿ ಮಹಾಜನ ಎಂಬೊಬ್ಬ ಡಾಕ್ಟರ ರಿದ್ದರು. ಅವರ ತಮ್ಮನೂ ನಾನೂ ಒಂದೇ ಕ್ಲಾಸಿನಲ್ಲಿ ದ್ದೆವು. ಆತನು ತುಂಬಾ ಅಭ್ಯಾಸಗುಳಿ; ನಾನು ತುಂಬಾ ಆಟಗುಳಿ ಆಗ ನನಗೆ ಗಂಜೀಪಿ ಆಡುವ ನಾದು ಬಹಳ. ಫಲಾಹಾರ ಮುಂತಾದ್ದಕ್ಕಾಗಿ ಸಿಕ್ಕಸಿಕ್ಕಂತೆ ಖರ್ಚುಮಾಡು ತ್ತಿದ್ದೆ. ಇದನ್ನೆಲ್ಲ ಡಾಕ್ಟರರ ತಮ್ಮನು ಡಾಕ್ಟರರಿಗೆ ಹೇಳು ತ್ತಿದ್ದನು ಡಾಕ್ಟರರು ನಮ್ಮ ತಂದೆಯವರ ಮುಂದೆ ಆ ಬಗ್ಗೆ ತಕರಾರು ಮಾಡುತ್ತಿದ್ದರು ತಂದೆಯವರು ಅದನ್ನು ಕಿವಿಗೆ ಹಾಕಿಕೊಳ್ಳುತ್ತಿರಲಿಲ್ಲ. ಕೊನೆಗೆ ಒಂದು ದಿವಸ "ಇದು ನೋಡಿರಿ, ಡಾಕ್ಟರರೇ, ನಾನು ಆತನಿಗೆ ಎಷ್ಟು ಖರ್ಚು ಮಾಡಿದಿ, ಏತಕ್ಕೆ ಖರ್ಚುಮಾಡಿದಿ ಎಂದು ಕೇಳಲಿಕ್ಕೆ ಹೋಗುವುದಿಲ್ಲ. ಅಂದಾಜಿಗಿಂತ ೫-೬ ರೂಪಾಯಿ ಮಾತ್ರ ಹೆಚ್ಚಿಗೆ ಕಳಿಸುತ್ತೇನೆ ಲೆಕ್ಕ ಕೇಳಿದರೆ ಆದರ ಸುಳ್ಳು ಲೆಕ್ಕವನ್ನು ಆತನು ಸಹಜ ಕೊಡಬಹುದು. ಅಡ್ಡ ಹಾದಿಗೆ ಹೋದರೆ ಮಾತ್ರ ಅಡ್ಡಬರುವೆನು" ಎಂದು ಹೇಳಿದರು.

ಇಂಡಿಯಲ್ಲಿದ್ದಾಗ ೧೯೦೨ರಲ್ಲಿ ಎಡ್ವರ್ಡ ಬಾದಶಹರ ಪಟ್ಟಾಭಿಷೇಕೋತ್ಸವವಾಯಿತು ಇಂಡಿ ತಾಲೂಕಿನ

ಒಂದು ಹಳ್ಳಿಯಿಂದ ಕತ್ತಿಯಮೇಲೆ ವಿಲಕ್ಷಣ ಕಸರತ್ತು ಮಾಡುವವರು ಬಂದಿದ್ದರು. ಕೆಲವು ವರುಷಗಳ ಹಿಂದೆ, ಒಬ್ಬ ಯುರೋಪಿಯನ್ನನು ಅವರ ವಿಲಕ್ಷಣ ಕಸರತ್ತು ನೋಡಿ, ಅವರಿಗೆ ಒಳ್ಳೇ ಬಕ್ಷೀಸುಗಳನ್ನು ಕೊಟ್ಟ ಅವರ, ಕೂಡಲೆ ಅವರ ಕತ್ತಿಗಳನ್ನು ಜಪ್ತುಮಾಡಿ ಕಚೇರಿಯಲ್ಲಿ ಇಡಿಸಿಬಿಟ್ಟ! ಆ ಸಬ್ಬಾಥಮಹೋತ್ಸವದಲ್ಲಿ ಅಷ್ಟುರಮುಷ್ಟಿಗೆ ಅವು ಅವರಿಗೆ ಕೊಡಲ್ಪಟ್ಟಿದ್ದವು. ಚಕ್ರಾಕಾರವಾಗಿ ಅನೇಕ ಕತ್ತಿಗಳನ್ನು ಅಲಗು ಮೇಲ್ಗಡೆಗೆ ಮಾಡಿ ನಿಲಿಸಿ, ಅವುಗಳಮೇಲೆ ಲಿಂಬೆಹಣ್ಣು ಮುಂತಾದವುಗಳನ್ನಿಟ್ಟು, ಅವರು ಬರಿಗಾಲಿನಿಂದ ಸರಸರನೆ ಹತ್ತಿ ಯೋಗಮಾಡಿ ತೋರಿಸಿದರು. ಅಂಥ ಅದ್ಭುತವಾಗಿ ಕಸರತ್ತು ಮಾಡುವವರನ್ನು ನಾನು ಈವರಗೆ ಯಾವ ಸರ್ಕಸಿನಲ್ಲಿಯೂ ನೋಡಿಲ್ಲ. ಅವರಿಗೆ ಇನಾಮು ಬೇಕಾಗಿದ್ದಿಲ್ಲ. ತಮ್ಮ ಕತ್ತಿಗಳು ಮರಳಿ ಬೇಕಾಗಿದ್ದವು. ಅವು ಸಿಕ್ಕಿದ್ದೇ ಇಲ್ಲವೊ ನೆನಪಿಲ್ಲ.

ಈ ಅವಧಿಯಲ್ಲಿ ಇತ್ತಕಡೆಗೆ ನಡೆದ ಚಳವಳಿಗಳು ನನಗೆ ಹೆಚ್ಚಿಗೆ ಗೊತ್ತಿಲ್ಲ. ೧೯೦೧ನೆಯ ಇಸ್ವಿಯ ಪ್ರಾರಂಭಕ್ಕೆ ವ್ಹಿಕ್ಟೋರಿಯಾ ರಾಣಿ, ನ್ಯಾಯಮೂರ್ತಿ ರಾನಡೆ ಇವರು ತೀರಿಕೊಂಡರು. ಆಗ ಪುಣೆಯಲ್ಲಿ ದುಃಖಪ್ರದರ್ಶನ ಸಭೆಗಳಾದವು. ಪುಣೆಯಲ್ಲಿಯ ಪ್ರತಿಯೊಂದು ಚಳವಳಿಯ ಪ್ರತಿಬಿಂಬವು ಇಲ್ಲಿ ಮೂಡುತ್ತಲೇ ಇತ್ತೆಂದು ಸಾಮಾನ್ಯವಾಗಿ ಹೇಳಬಹುದು. ೧೨-೭-೧೯೦೧ ನೆಯ ಇಸ್ವಿಯ ದಿವಸ, ಧಾರವಾಡದಲ್ಲಿ ಲ್ಯಾಂಡರೆವ್ಹಿನ್ಯೂ ಬಿಲ್ಲನ್ನು

ನಿಷೇಧಿಸುವುದಕ್ಕೆ ಪ್ರಚಂಡ ಸಭೆಗೂಡಿತ್ತೆಂದು ಪತ್ರಿಕೆಗಳಲ್ಲಿ ಓದಿದೆನು. ಅದೇ ತಿಂಗಳಲ್ಲಿ (೨೯-೭-೧೯೦೧) ಕರ್ನಾಟಕ ಎಜ್ಯುಕೇಶನ್ ಸೊಸಾಯಿಟಿಯು ಸ್ಥಾಪಿತವಾಗಿ, ವ್ಹಿಕ್ಟೋರಿಯಾ ಹಾಯಸ್ಕೂಲು ಅವರ ಅಧೀನಕ್ಕೆ ಹೋಯಿತು. ೮-೮-೧೯೦೨ನೆಯ ಇಸ್ವಿಯ ದಿವಸ ಈಗಿನ ಮೈಸೂರ ಮಹಾರಾಜರು ಮೈಸೂರಿನಲ್ಲಿ ಮೂರ್ಧಾಭಿಷಿಕ್ತರಾದ ಸುದ್ದಿ ಕೇಳಿ ನಾವು ಸಂತೋಷಪಟ್ಟೆವು. ಆದರೆ, ಆಗ ಇನ್ನೂ ಮೈಸೂರಿನವರೂ ನಾವೂ ಒಂದೇ ಎಂಬ ಭಾವನೆ ಚೆನ್ನಾಗಿ ಅಂಕುರಿತವಾಗಿದ್ದಿಲ್ಲ. ೧೯೦೩ನೆಯ ಇಸ್ವಿಯ ಎಪ್ರಿಲ ತಿಂಗಳಿನಲ್ಲಿ ಧಾರವಾಡದಲ್ಲಿ, ಮುಂಬಯಿ ಇಲಾಖೆಯ ಪ್ರಾಂತಿಕ ಪರಿಷತ್ತು ನಾ. ಖರೇ ಇವರ ಅಧ್ಯಕ್ಷತೆಯಲ್ಲಿ ನೆರೆದಿತ್ತು. ಅದೇ ಕಾಲಕ್ಕೆ ಪ್ರಾಂತಿಕ ಸಾಮಾಜಿಕ ಪರಿಷತ್ತೂ ಕೂಡಿತ್ತು. ಪ್ರಾಂತಿಕ ಪರಿಷತ್ತಿನ ಬಗ್ಗೆ, ತಾವೊಬ್ಬರೇ ೩೫೦೦ ರೂಪಾಯಿಗಳವರೆಗೆ ಭಾರ ಹೊರುತ್ತೇನೆಂದು ಶ್ರೀ ಪಾಂಡೆ ಗುರುನಾಥರಾಯರು ಹೊಣೆಹೊತ್ತರು. ಶ್ರೀ ಕರಿಗುದರಿ ನಾರಾಯಣರಾಯರೊಬ್ಬರೇ ಒಂದು ಸಾವಿರ ರೂಪಾಯಿ ಕೂಡಿಸಿದರು. ಪರಿಷತ್ತಿನಲ್ಲಿ ಮಂದಪಕ್ಷ(moderates)ದವರ ಪ್ರಾಬಲ್ಯ. ನಾ. ಖರೆಯವರ ಮಿತ್ರರಾದ ಲೊ. ಟಿಳಕರೂ ಬಂದಿದ್ದರು. ಅವರ ಸ್ವಾಗತವು ಇಲ್ಲಿ ಅತಿ ವಿಜೃಂಭಣೆಯಿಂದಾಯಿತೆಂದು ಕೇಳಿದೆ. ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಪ್ರತ್ಯೇಕವಾದ ಕಟ್ಟಡಬೇಕೆಂಬ ಕಲ್ಪನೆ ಹೊರಟದ್ದೂ ಇದೇ (೧೯೦೩) ವರ್ಷದಲ್ಲಿ ೧೯೦೪ರಲ್ಲಿ ವೀರಶೈವ ಮಹಾಸಭೆಯ ಮೊದಲನೆಯ ಅಧಿವೇಶನವು ಧಾರವಾಡದಲ್ಲಿ ಕೂಡಿತ್ತು. ಈ

ವರ್ಷ, ಮೈಸೂರ ಮಹಾರಾಜರು ಸಂಘದ ಕಟ್ಟಡಕ್ಕೆ ೩೦೦೦ ರೂಪಾಯಿಗಳನ್ನು ದಯಪಾಲಿಸಿದರು.

**ಕರ್ನಾಟಕತ್ವದ ಉದಯ.**—ನಾನು ಕಾಲೇಜಿನಲ್ಲಿದ್ದಾಗ, ಕರ್ನಾಟಕತ್ವದ ಕಲ್ಪನೆ ಇನ್ನೂ ಉದಯವಾಗಿದ್ದಿಲ್ಲ. ಕರ್ನಾಟಕವು ಪ್ರತ್ಯೇಕವೆಂಬ ಭಾವನೆ ಇರಲಿಲ್ಲ. ಅದು ರಾಜಕೀಯ ಚಳವಳಿಯಲ್ಲಿ ಮಹಾರಾಷ್ಟ್ರದ ಒಂದು ಅಂಗಮಾತ್ರವೇ ಆಗಿತ್ತು. ಕರ್ನಾಟಕವೆಂಬ ಕಲ್ಪನೆಯೇ ನಮ್ಮ ವಿದ್ಯಾರ್ಥಿಗಳ ಮನದಲ್ಲಿ ಮೂಡಿದ್ದಿಲ್ಲ; ಇಷ್ಟೇ ಅಲ್ಲ, ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳ ನಡುವೆ ಬಳಿಕೆಯೇ ಬಹಳವಿದ್ದಿಲ್ಲ ಕಾರವಾರವಂತೂ ತೀರ ಅಪರಿಚಿತ. ಅಲ್ಲಲ್ಲಿ ಹಲಿಕೆಲವು ರಾಜಕೀಯ ಮುಖಂಡರೇನೋ ಕೆಲಸ ಮಾಡುತ್ತಿದ್ದರು. ಆದರೆ, ಅವರಿಗೆ ಒಬ್ಬರಿಗೊಬ್ಬರ ಪರಿಚಯವೇ ವಿಶೇಷವಿದ್ದಿಲ್ಲ. ಪುಣೆಗೆ ಬಂದ ವಿದ್ಯಾರ್ಥಿಗಳಲ್ಲಿ ಈ ತರಹದ ಐಕ್ಯಭಾವನೆಯು ಅವರಿಗೂ ಕೂಡ ಸ್ಪಷ್ಟವಾಗಿ ತಿಳಿಯದಂತೆ ಮೆಲ್ಲಮೆಲ್ಲನೆ ಅಂಕುರಿಸತೊಡಗಿತು. ಮರಾಟಿಗರು "ಕಾನಡೀ ಅಪ್ಪಾ" ಎಂದು ನಮ್ಮನ್ನು ಕರೆಯುತ್ತಿದ್ದರು. ಆದರೆ, ಅದರಲ್ಲಿ ಆಗ ಕುಚೋದ್ಯಬುದ್ಧಿ ಇರಲಿಲ್ಲ; ಭೇದಬುದ್ಧಿಮಾತ್ರವೇ ಇತ್ತು. ಅದೇ ನಮ್ಮ ಕನ್ನಡಿಗರಿಗೆ ತಮ್ಮ ಐಕ್ಯಭಾವನೆಗೆ ಪುಟಕೊಟ್ಟಿತು. ಸ್ವಾಭಾವಿಕವಾಗಿಯೇ ಕನ್ನಡಿಗರು ತಮ್ಮ ಊಟದ ಕ್ಲಬ್ಬುಗಳನ್ನು ಬೇರೆ ಮಾಡಿಕೊಂಡರು. ಆದರೆ, ನಮ್ಮಲ್ಲಿಯೇ ಮರಾಠಿಯ ಮೋಹವು ಹೋಗಿದ್ದಿಲ್ಲ. ಬ್ರಾಹ್ಮಣರಂತೂ ಮರಾಠಿಯವರೊಡನೆಯೇ ಹೆಚ್ಚಿಗೆ ಸ್ನೇಹಸಂಬಂಧ ಬೆಳಿಸುತ್ತಿದ್ದರಲ್ಲದೆ, ಲಿಂಗಾಯ

ತರೀ ಮುಂತಾದ ಕನ್ನಡಿಗರೊಡನೆ ಅಲ್ಲ. ಕಂಬಳಿ, ರೈನಾಪುರ ಮುಂತಾದವರು ಆಗ ನಮ್ಮೊಡನೆ ಕಲಿಯುತ್ತಿದ್ದರು ಆದರೂ ಅವರೂ ಪ್ರತ್ಯೇಕವಿದ್ದಂತೆಯೇ ಇದ್ದರು. ಮರಾಠಿ ಭಾಷೆಯಲ್ಲಿ ಲಿಂಗಪ್ರತ್ಯಯ ಮುಂತಾದವುಗಳ ತೊಡಕು ಇಲ್ಲದಿದ್ದರೆ, ನಮ್ಮಲ್ಲಿ ಎಷ್ಟೋ ಜನರು ಪೂರ್ಣ ಮರಾಟಿಗರಾಗಿಯೇ ಹೋಗುತ್ತಿದ್ದರು. ಆ ತೊಡಕೇ ನಮ್ಮ ಕನ್ನಡವನ್ನು ರಕ್ಷಿಸುವ ಕೋಟೆಯಾಗಿತ್ತು, ಅದೇಕೆ ಇನ್ನೂವರೆಗೂ ಆಗಿದೆಯೆಂದು ಹೇಳಬಹುದು. ಆಗ ಕನ್ನಡದ ಸಂಬಂಧವಾಗಿ ವಿಶೇಷ ಅಭಿಮಾನವಿಲ್ಲದಿದ್ದರೂ, ಅಭಿಮಾನ ಹುಟ್ಟಿಸುವ ಪ್ರಸಂಗಗಳು ತಾನಾಗಿಯೇ ಒದಗುತ್ತಿದ್ದವು. ಫರ್ಗ್ಯೂಸನ್ ಕಾಲೇಜದ ದೊಡ್ಡ ಲಾಯಬ್ರರಿಯಲ್ಲಿ ಒಂದೂ ಕನ್ನಡ ಪುಸ್ತಕವಿರಲಿಲ್ಲ ಇದು ಕನ್ನಡದ ಉಜ್ವಲಾಭಿಮಾನಿಯಾಗಿದ್ದ ರೊದ್ದ ವ್ಯಾಸರಾಯನಿಗೆ ಸಹನವಾಗಲಿಲ್ಲ. ಆತನು ಚಳವಳಿ ಹೂಡಿದನು. ನಾವೆಲ್ಲರೂ ಬಹಳ ಬಡಿದಾಡಿದ ಬಳಿಕ, ನಮ್ಮ ಪಾಲಿಗೆ ೫೦ ರೂಪಾಯಿಗಳು ಮಂಜೂರು ಮಾಡಲ್ಪಟ್ಟವು ಆದರೆ ಆ ೫೦ ರೂಪಾಯಿಗಳಲ್ಲಿ ಯಾವ ಪುಸ್ತಕಗಳನ್ನು ತರಿಸಬೇಕೆಂಬುದು ತಿಳಿಯಲಿಲ್ಲ. ಬಿ. ವೆಂಕಟಾಚಾರ್ಯರು ಬಂಗಾಲಿಯಿಂದ ಭಾಷಾಂತರಿಸಿದ ಕನ್ನಡ ಕಾದಂಬರಿಗಳ ಹೆಸರುಗಳ ಪರಿಚಯವೇ ನಮ್ಮ ಜ್ಞಾನದ ಭಂಡವಲು. ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಪತ್ರಬರೆದು ತರಿಸಿ ಪುಸ್ತಕಗಳನ್ನು ಕೊಂಡೆವು. ಆದರೆ ಆ ಪುಸ್ತಕಗಳು ಬಂದಬಳಿಕ, ನಾವು ಆ ಪುಸ್ತಕಗಳನ್ನು ಏಕೆ ತರಿಸಿದೆವೋ ಎಂದೆನಿಸಿತು ಏಕೆಂದರೆ, ಅವುಗಳಲ್ಲಿ ಬಹು

ತರವಾಗಿ ಯಾವ ಪುಸ್ತಕವೂ ಕಿರುಬೆರಳಿಗಿಂತ ದಪ್ಪವಾದದ್ದಿ ರಲಿಲ್ಲ; ಹೊಲಸು ಕಾಗದ, ಹೊಲಸು ಮುದ್ರಣ. ಡೆಕ್ಕನ್ ಕಾಲೇಜದಲ್ಲಿ, ಕನ್ನಡ ವಿದ್ಯಾರ್ಥಿಗಳಿಗೆ ನಮಗಿಂತ ಹೆಚ್ಚಿನ ಸೌಕರ್ಯಗಳಿದ್ದವು. ಅಲ್ಲಿ ಕನ್ನಡ ವಿದ್ಯಾರ್ಥಿಗಳು ಬಹಳ. ಅವರಲ್ಲಿಯೂ ಭಾಷಾಭಿಮಾನ ಅಷ್ಟಕ್ಕಷ್ಟೆ. ಕನ್ನಡಿ ಗರು ಮರಾಠೀ ನಾಟಕಗಳಲ್ಲಿಯೇ ನಾಯಕ ನಾಯಿಕೆಯರ ಪಾತ್ರಗಳನ್ನು ವಹಿಸಿ, ಹೆಸರು ಪಡೆಯುವುದು ಅಲ್ಲಿಯ ಪದ್ಧತಿ ಮುಂದೆ ವಕೀಲನಾದಾಗ, ಕನ್ನಡದ ಕಟ್ಟಾಭಿ ಮಾನಿಯಾಗಿ ಶುಭೋದಯ ಪತ್ರಿಕೆಯನ್ನು ನಡಿಸಿದ ಬಿ. ಜಿ. ಕುಲಕರ್ಣಿಯು ನಮ್ಮ ಕಾಲಕ್ಕೆ ಡೆಕ್ಕನ ಕಾಲೇಜದಲ್ಲಿ ದ್ದಾಗ, 'ಆಥೆಲ್ಲೊ' ಪಾತ್ರವನ್ನು ವಹಿಸಿ, ತನಗೆ ಮರಾಠೀ ಚೆನ್ನಾಗಿ ಬಾರದಿದ್ದರೂ, ಪಾರುಮಾಡಿ ಕಲಿತು ಅತ್ಯುತ್ಕೃಷ್ಟ ವಾಗಿ ಪಾತ್ರವನ್ನು ಅಭಿನಯಿಸಿ ತೋರಿಸಿದನೆಂಬುದನ್ನು ಹೇಳಿದರೆ, ಆಗಿನ ನಮ್ಮ ಕನ್ನಡಿಗರ ಮರಾಠಿಯ ಮೋಹದ ಕಲ್ಪನೆಯಾಗಬಹುದು. ನಮ್ಮ ಫರ್ಗ್ಯೂಸನ್ನದ ವಾತಾ ವರಣವು ತುಸುಮಟ್ಟಿಗೆ ಭಿನ್ನವಾಗಿತ್ತು. ದೇಶಾಭಿಮಾನದ ಕೂಡ, ಭಾಷಾಭಿಮಾನದ ಗಾಳಿಯು ಸ್ವಲ್ಪಸ್ವಲ್ಪ ಸುಳಿ ಯುತ್ತಿತ್ತು. ಅದು ನಮ್ಮಲ್ಲಿ ಸೇರಿ ಕೆಲವೊಮ್ಮೆ ನಮ್ಮನ್ನು ಕುಣಿಸುತ್ತಲೂ ಇತ್ತು. ಒಂದಾವರ್ತಿ, ನಮ್ಮಲ್ಲಿ ಹೀಗೆ ವಾಯುಸಂಚಾರವಾಯಿತು. ನಾವೂ ನಾಟಕವಾಡಬೇಕೆಂಬ ಆಕಾಂಕ್ಷೆ. ಮರಾಠಿಯಲ್ಲಿ ಮಾಡಬಾರದೆಂಬ ನಿರ್ಧಾರ. ಕನ್ನಡವಲ್ಲಿ ಮಾಡಬೇಕೆ ? ಹಾಗೆ ಮಾಡಿದರೆ ಆಡುವವರೂ ನಾವೇ ನೋಡುವವರೂ ನಾವೇ ಇಂಥ ಸ್ಥಿತಿ. ವಿಚಾರ ಮಾಡಿ, ಕೊನೆಗೆ ಇಂಗ್ಲಿಷ ನಾಟಕವಾಡುವುದನ್ನು ಕನ್ನಡಿ

ಗರಿಗೇನೇ ಒಪ್ಪಿಸಿಬಿಡಬೇಕೆಂದು ಕೇಳಿದೆವು. ಮರಾಠಿಗರು ಇಂಗ್ಲಿಷ ನಾಟಕದಲ್ಲಿ ತಾವೂ ಏಕೆ ಸೇರಬಾರದೆಂದು ವಾದಿಸಿದರು ವಾದವು ವಿಕೋಪಕ್ಕೆ ಹೋಯಿತು. ಗ್ಯಾದರಿಂಗಕ್ಕೇನೇ ಬಹಿಷ್ಕಾರ ಹಾಕಬೇಕೆಂದು ಗೊತ್ತುಮಾಡಿದೆವು ಆದರೆ ಅದಕ್ಕೆ ಮುಂಚೆ, ಪ್ರೊಫೆಸರರ ಕಿವಿಗೆ ಹಾಕಬೇಕೆಂದು ತಿಳಿದು ದೊಡ್ಡ ವ್ಯಾಸರಾಯನೂ ನಾನೂ ಮಗವಳನೂ ಪ್ರೊ. ರಾಜವಾಡೆಯವರ ಕಡೆಗೆ ಡೆಪ್ಯೂಟೇಶನ್ ಹೋದೆವು. ಪ್ರೊ. ರಾಜವಾಡೆಯವರು ಉಭಯ ಪಕ್ಷದವರನ್ನು ಕೇಳಿಕೊಂಡು, ನಮ್ಮಂತೆ ತೀರ್ಪು ಕೊಟ್ಟರು. ಆಗ, ಫೆಲೋ ಆಗಿದ್ದ ಕಾನಿಟಕರರ (ಮುಂದೆ ಅವರು ಪ್ರಿನ್ಸಿಪಾಲರಾದರು) ಮೋರೆ ಗುಬ್ಬಿಯ ಮೋರೆ ಆಯಿತು. ನಮ್ಮ ಭಾವಣಿಯಲ್ಲಿ ಟೊಪ್ಪಿಗೆಗಳು ತೂರಾಡಿದವು ಮುಂದೆ ವಿಲಕ್ಷಣವಾಗಿ ಬೆಳೆದ ಮರಾಠಿ-ಕನ್ನಡ ಯುದ್ಧಗಳಲ್ಲಿ ಇದೇ ಮೊದಲನೆಯದೆಂದು ತೋರುತ್ತದೆ.

---

[illegible]ನೆಯ ಪ್ರಕರಣ

## ನನ್ನ ಹಿಂದಿನ ಜೀವನದ ಹಿನ್ನೋಟ

ಇಲ್ಲಿಯವರೆಗೆ ನಾನು ನನ್ನ ವಿದ್ಯಾರ್ಥಿದಸೆಯ ಸ್ಮೃತಿಗಳನ್ನು ಕೊಟ್ಟಿರುವೆನಷ್ಟೆ ಆ ಸ್ಮೃತಿಗಳ ಸಮಾಲೋಚನೆಯನ್ನು ಸಂಕ್ಷೇಪವಾಗಿ ಮಾಡಿ, ಅವುಗಳ ಪರಿಣಾಮವು ನನ್ನ ಮುಂದಿನ ಜೀವನದ ಮೇಲೆ ಯಾವ ರೀತಿಯಿಂದ ಆಯಿತೆಂಬುದನ್ನು ಇನ್ನು ಹೇಳುವೆನು.

ನಾನು ಪ್ರಥಮ ಪ್ರಕರಣದಲ್ಲಿ ಮಾಡಿದ ಪ್ರತಿಜ್ಞೆಯಂತೆ, ನನ್ನ ಸಾಂಸಾರಿಕ ಜೀವನಕ್ಕೆ ವಿಶೇಷ ಪ್ರಾಧಾನ್ಯ

ವನ್ನು ಕೊಡದೆ, ಕೇವಲ ಹಿಸ್ನೆಲೆಯೆಂದು ಕೆಲವು ಸ್ಮೃತಿ ಗಳನ್ನು ಕೊಟ್ಟಿರುವೆನೆಂಬುದು ವಾಚಕರ ಧ್ಯಾನದಲ್ಲಿ ಬಂದಿರಲಿಕ್ಕೆ ಸಾಕು. ಈ ಸ್ಮೃತಿಗಳಲ್ಲಿ ಕೆಲವು ಗೃಹಸ್ಮೃತಿ ಗಳಿವೆ, ಮಿಕ್ಕವು ಸಾರ್ವಜನಿಕ ಸ್ಮೃತಿಗಳಿವೆ. ಗೃಹ ಸ್ಮೃತಿಗಳಲ್ಲಿ ನನ್ನ ಮುಂದಿನ ಜೀವನದ ಜೀವನಕ್ರಮ ವನ್ನು ನಿರ್ಣಯಿಸುವುದಕ್ಕೆ ಸಾಧನಗಳಾದವುಗಳನ್ನೇ ವಿಶೇಷವಾಗಿ ಕೊಟ್ಟಿರುವೆನು. ಆದರಿಂದ, ನನಗೆ ನನ್ನ ಸುದೈವದಿಂದುಂಟಾದ ಗೃಹಸಂಸ್ಕಾರಗಳಿಗೆ ನಾನು ಎಷ್ಟು ಮಟ್ಟಿಗೆ ಋಣಿಯಾಗಿರುವೆನೆಂಬುದು ಗೊತ್ತಾಗುವುದು ಹಾಗೆಯೇ, ನನ್ನ ಸುದೈವದಿಂದ, ಬಾಹ್ಯ ಸಂಸ್ಕಾರಗಳೂ ನನಗೆ ಒಳ್ಳೆಯವೇ ಉಂಟಾದವು. ಬಾಲತನದಿಂದ ಹೊರಗೆ ಬೀಳಬೀಳುವಷ್ಟರಲ್ಲಿ, ಒಂದರ ಮೇಲೊಂದು ಬಾಹ್ಯಸಂಸ್ಕಾರಗಳು ನನ್ನ ಮನಸ್ಸಿನಮೇಲೆ ಉಂಟಾಗಿ, ಅವು ನನ್ನ ಮುಂದಿನ ಜೀವನಕ್ರಮವನ್ನು ನಿರ್ಣಯಿಸುವು ದಕ್ಕೆ ಸಹಾಯಕವಾದವು. ವಾಙ್ಮಯ, ರಾಜಕಾರಣ, ಧರ್ಮ, ನೀತಿ, ಭಕ್ತಿ, ಜ್ಞಾನ ಮುಂತಾದ ಅನೇಕ ವಿಷಯಗಳಲ್ಲಿ ಆ ನನ್ನ ಗೃಹಸಂಸ್ಕಾರಗಳೂ ಬಾಹ್ಯ ಸಂಸ್ಕಾರಗಳೂ ಪರಿಣಾಮವನ್ನುಂಟುಮಾಡಿರುವವೆಂಬು ದನ್ನು ವಾಚಕರು ನನ್ನ ಜೀವನದಲ್ಲಿ ಮುಂದೆ ಕಾಣ ಬಹುದು. ನನ್ನಂತೆಯೇ ನನ್ನ ಸರಿಜೋಡಿಯ ಅನೇಕ ವಿದ್ಯಾರ್ಥಿಗಳು ಇದ್ದರು. ಅವರಲ್ಲಿ ಯಾರೂ ಆಗಿನ ಕಾಲಕ್ಕೆ ನನ್ನಂತೆ ಕರ್ನಾಟಕದ ಸೇವೆಯನ್ನು ಮಾಡುವುದಕ್ಕೆ ದೃಢ ಸಂಕಲ್ಪಮಾಡಿ ಮುಂದೆ ಬರಲಿಲ್ಲ. ಇದಕ್ಕೇನು ಕಾರಣ? ನನ್ನಮೇಲೆಯೇ ಆ ಸಂಸ್ಕಾರಗಳು ಅಷ್ಟೇಕೆ ಬಲವಾದ

ಪರಿಣಾಮವನ್ನುಂಟುಮಾಡಿದವು? ಎಂಬ ಪ್ರಶ್ನೆಗಳಿಗೆ ನಾನು ಉತ್ತರಕೊಡುವುದು ಮಾತ್ರ ಕಠಿನಕೆಲಸವು. ಆ ಸಂಸ್ಕಾರ ಬೀಜಗಳು ಫಲಿತವಾಗುವುದಕ್ಕೆ ಬೇಕಾಗುವ ಯೋಗ್ಯ ಭೂಮಿಯು ನನ್ನ ದೇಹವಾಗಿರಬೇಕೆಂಬುದಷ್ಟೇ ಉತ್ತರವನ್ನು ನಾನು ಕೊಡಬಲ್ಲೆನಲ್ಲದೆ, ಹೆಚ್ಚಿನ ಉತ್ತರಕೊಡಲಾರೆ. ಅದು ನನ್ನ ಹಿಂದಿನ ಜನ್ಮದ ಪುಣ್ಯ ವೆಂದೇ ಅನ್ನಬೇಕು. ಗೃಹಸಂಸ್ಕಾರ, ಸಾರ್ವಜನಿಕಸಂಸ್ಕಾರ ಇವುಗಳ ಜೊತೆಗೆ ಅನುಕೂಲ ವಾತಾವರಣ ಮತ್ತು ಪ್ರಾರಬ್ಧಕರ್ಮದ ಮೂಲಕ ಪ್ರಾಪ್ತವಾದ ಯೋಗ್ಯಭೂಮಿ ಇವೇ ಮುಂತಾದವುಗಳೆಲ್ಲವೂ ಕೂಡಿದರೆ ಮಾತ್ರವೇ ಮನು ಷ್ಯನಿಗೆ ತನ್ನ ಜೀವಿತವನ್ನು ಯಾವುದೊಂದು ಧ್ಯೇಯಕ್ಕೆ ಅರ್ಪಿಸುವ ಪುಣ್ಯವು ಪ್ರಾಪ್ತವಾಗುತ್ತದೆ. ನನ್ನ ಜೀವನದಲ್ಲಿ ೧೯೦೫-೬ನೆಯ ಇಸ್ವಿಯ ಸುಮಾರಕ್ಕೆ ಆ ತರಹದ ಸಂಯೋಗವಾಯಿತು. ಅಂತಲೇ, ನನ್ನಂಥ ಅಲ್ಪನಿಗೂ, ನನ್ನ ಯೋಗ್ಯತೆ ಮೀರಿ ಹತ್ತುಪಟ್ಟು ಕಾರ್ಯಮಾಡುವುದು ಸಾಧ್ಯವಾಯಿತು. ಏಕೆಂದರೆ, ನಾನು ಮೊದಲಿಗೇನೇ ಹೇಳಿ ದಂತೆ ನಾನೇನು ಅಲೌಕಿಕ ಪುರುಷನೇನೂ ಅಲ್ಲ. ಮಹಾ ವಿಭೂತಿಯಲ್ಲಿ ಇರತಕ್ಕ ಯಾವುದೊಂದು ಗುಣವೂ ನನ್ನಲ್ಲಿ ಇಲ್ಲ. ಅಸಾಮಾನ್ಯವಾದ ಬುದ್ಧಿಮತ್ತೆ ನನ್ನಲ್ಲಿ ಇಲ್ಲ. ಅದ್ಭುತವಾದ ಕ್ರಿಯಾಶಕ್ತಿಯುಳ್ಳವನು ನಾನಲ್ಲ; ಅಪ್ರತಿಮ ವಾದ ಯೋಗಶಕ್ತಿಯೂ ಕೂಡ ನನ್ನಲ್ಲಿ ಇಲ್ಲ. ಹೀಗೆ, ಅದ್ವಿತೀಯವಾದ ಯಾವ ಗುಣವೂ ನನ್ನಲ್ಲಿ ಇಲ್ಲ. ಇಂಥ ಸಾಮಾನ್ಯಪುರುಷನ ಜೀವನಸ್ಮೃತಿಯ ಮಹತ್ವವೇನು, ಎಂದು ಹಲವರು ಕೇಳಬಹುದು. ಅದಕ್ಕೆ ನನ್ನ ಉತ್ತರ

ವೇನೆಂದರೆ, ನಾನು ಸಾಮಾನ್ಯ ಮನುಷ್ಯನಾದುದರಿಂದಲೇ ಸಾಮಾನ್ಯ ವಾಚಕರ ದೃಷ್ಟಿಯಿಂದ, ನನ್ನ ಜೀವನಸ್ಮೃತಿಗಳಿಗೆ ಮಹಾವಿಭೂತಿಗಳ ಜೀವನಸ್ಮೃತಿಗಿಂತಲೂ ಒಂದು ದೃಷ್ಟಿಯಿಂದ ಹೆಚ್ಚಿಗೆ ಮಹತ್ವವಿದೆ. ನನ್ನ ಜೀವನದಿಂದ, ಸಾಮಾನ್ಯ ಮನುಷ್ಯನೂ ತನ್ನ ಯೋಗ್ಯತೆಯ ಮಟ್ಟಿಗೆ ಸಾರ್ವಜನಿಕಕಾರ್ಯ ಮಾಡಬಲ್ಲನೆಂಬ ಭರವಸೆ ಉಂಟಾಗುತ್ತದೆ ಅಲ್ಲದೆ, ನಾನು ಮೊದಲಿಗೇನೇ ಹೇಳಿದಂತೆ, ಕರ್ನಾಟಕದ ಯಾವತ್ತು ಬಗೆಯ ಚಟುವಟಿಕೆಗಳ ದೃಷ್ಟಿಯಿಂದ, ನನ್ನ ಸುದೈವದ ಮೂಲಕ ನನ್ನ ಜೀವನಕ್ಕೆ ಒಂದು ವಿಶಿಷ್ಟಸ್ಥಾನವು ನನಗೂ ಕೂಡ ತಿಳಿಯದಂತೆ ತಾನಾಗಿಯೇ ಪ್ರಾಪ್ತವಾಗಿದೆ ಅದರ ಮೂಲಕ, ನನ್ನ ಜೀವನಸ್ಮೃತಿಗಳು ಕರ್ನಾಟಕದ ಚಟುವಟಿಕೆಗಳ ಗುಣದೋಷಗಳೆರಡನ್ನೂ ಈಗಿನ ತರುಣರ ಲಕ್ಷ್ಯಕ್ಕೆ ತಂದುಕೊಡುವುದರಿಂದ, ಅವು ಅವರ ಮುಂದಿನ ಮಾರ್ಗಕ್ರಮಣಕ್ಕೆ ಮಾರ್ಗದರ್ಶಿಗಳಾಗಬಹುದೆಂಬ ಆಶೆಯೂ ನನಗಿದೆ. ಈ ವಿಷಯವನ್ನು ಕುರಿತು ನಾನು ಈ ಗ್ರಂಥದ ಪ್ರಸ್ತಾವನೆಯಲ್ಲಿ ವಿಶೇಷವಾಗಿ ಬರೆಯತಕ್ಕವನೇ ಇರುವುದರಿಂದ ಇಲ್ಲಿ ಇಷ್ಟು ಸಾಕು.

ನನ್ನ ಗೃಹಸಂಸ್ಕಾರಗಳೂ ಬಾಹ್ಯಸಂಸ್ಕಾರಗಳೂ ಎರಡೂ ನನ್ನ ಸಾರ್ವಜನಿಕ ಜೀವನಕ್ಕೆ ಪುಷ್ಟಿಯನ್ನು ಕೊಟ್ಟವು. ರಾಜಕಾರಣಕ್ಕೆ ಸಂಬಂಧಿಸಿದ ಸ್ಮೃತಿಗಳು ರಾಜಕಾರಣದಲ್ಲಿ ನಾನು ಸೇರಬೇಕೆಂಬ ಲವಲವಿಕೆಯನ್ನು ಹುಟ್ಟಿಸಿದವು. ವಾಙ್ಮಯದ ಸ್ಮೃತಿಗಳು ನನ್ನ ಜೀವಮಾನದಲ್ಲಿ ವಾಙ್ಮಯಸೇವೆಯನ್ನು ಮಾಡಬೇಕೆಂಬ ಕುತೂಹಲವನ್ನು ಜಾಗೃತಗೊಳಿಸಿದವು. ಆಗ, ಕರ್ನಾಟಕವು ಪ್ರತ್ಯೇಕಪ್ರಾಂತವೆಂಬ

ಕಲ್ಪನೆಯು ಹುಟ್ಟಿರದಿದ್ದರೂ, ನಾನು ದೇಶಸೇವೆಯನ್ನು ಮಾಡುವ ಕಾರ್ಯಕ್ಷೇತ್ರವು ಕರ್ನಾಟಕವು ಎಂಬ ಕಲ್ಪನೆಯು ಅಂಥವಾಗಿ, ಮುಂದವಾಗಿ ನನ್ನ ಮನದಲ್ಲಿ ಮೂಡ ಹತ್ತಿತ್ತು. ದೇಶದ ಸ್ವಾತಂತ್ರ್ಯವನ್ನು ಪಡೆಯುವುದಕ್ಕೆ ಕಂಕಣ ಬದ್ಧರಾಗಿದ್ದ ಶ್ರೀ. ಸಾವರಕರ ಶ್ರೀ ಬಾಪಟ ಮುಂತಾದ ವೀರಧೀರರ ಸಮೀಪದ ಸಹವಾಸದ ಮೂಲಕ, ಜಾತ್ಯಾ ಕ್ಷತ್ರಿಯನಲ್ಲದಿದ್ದ ನನ್ನಲ್ಲಿ ಕೂಡ ವೀರಾವೇಶವು ತುಂಬಿ ತುಳುಕಹತ್ತಿತ್ತು. ದೇಶೋನ್ನತಿಗಾಗಿ, ನಾನು ನನ್ನ ಜೀವಿತ ಸರ್ವಸ್ವವನ್ನು ಅರ್ಪಿಸಬೇಕೆಂಬ ಆತುರತೆಯು ನಡುನಡುವೆ ತೀಕ್ಷ್ಣವಾಗಿ ಪ್ರಜ್ವಲಿತವಾಗುತ್ತಿತ್ತು. ಆದರೆ, ಅದು ಕೂಡಲೆ ಆರಿಯೂ ಹೋಗುತ್ತಿತ್ತು. ಏಕೆಂದರೆ, ಕಾಲೇಜದಿಂದ ಕರ್ನಾಟಕಕ್ಕೆ ಬಂದಕೂಡಲೆ ಕತ್ತಲುಗವಿದ ಕಟ್ಟಡವಿಯಲ್ಲಿ ಕಣ್ಣು ಕಟ್ಟಿ ಬಿಡಲ್ಪಟ್ಟವರಂತೆ ನನ್ನ ಅವಸ್ಥೆಯಾಗುತ್ತಿತ್ತು. ನಾನು ನನ್ನ ಕೆಲವು ಜೀವನಸ್ಮೃತಿಗಳಲ್ಲಿ ಕರ್ನಾಟಕದ ಆಗಿನ ಸ್ಥಿತಿಯನ್ನೂ ಕೆಲಮಟ್ಟಿಗೆ ಬಣ್ಣಿಸಿಯೇ ಇರುವೆ. ಕರ್ನಾಟಕದಲ್ಲಿ ಆಗ ಯಾವ ಚಳವಳಿಯೂ ತರುಣರನ್ನು ದೇಶ ಸೇವೆಗೆ ಆಕರ್ಷಿಸುವಷ್ಟು ಪ್ರಬಲವಾಗಿರಲಿಲ್ಲ. ದೇಶಸೇವೆಗಾಗಿ ತಮ್ಮ ಜೀವನಸರ್ವಸ್ವವನ್ನು ಅರ್ಪಿಸಿದ ಒಬ್ಬ ವ್ಯಕ್ತಿಯೂ ಕರ್ನಾಟಕದಲ್ಲಿ ಇರಲಿಲ್ಲ. ಸರಕಾರೀ ನವಕರಿಯಲ್ಲಿ ದೊಡ್ಡದೊಡ್ಡ ಸ್ಥಳಗಳನ್ನು ಆಕ್ರಮಿಸಿದವರೇ ಆಗಿನ ಕಾಲದ ಕರ್ನಾಟಕದ "ಶ್ರೇಷ್ಠರು. ಅವರ ಮಕ್ಕಳೂ ಮೊಮ್ಮಕ್ಕಳೂ ಅದೇ ಗುಂಗಿನಲ್ಲಿ ಮಗ್ನರಾದವರು. ನನ್ನ ಸುದೈವದಿಂದ, ನನ್ನ ಗೃಹಸಂಸ್ಕಾರವು ಅದಕ್ಕೆ ವಿರುದ್ಧವಾಗಿದ್ದುದರಿಂದಲೇ, ನನಗೆ ಸರಕಾರೀ ನವಕರಿ ಮಾಡುವ ಪ್ರಸಂಗ ಬರ

ಲಿಲ್ಲ. ನಮ್ಮ ತಂದೆಯವರ ಮನದಲ್ಲಿ ಸನ್ನನ್ನು ನವಕರಿ ಯಲ್ಲಿ ಸೇರಿಸಬೇಕೆಂದು ಬಂದಿದ್ದರೆ, ನಾನೂ, ಯೋಗ್ಯತೆಯ ಬಲದಿಂದಲ್ಲದಿದ್ದರೂ ಕಾಲಬಲದಿಂದ ಒಬ್ಬ ದೊಡ್ಡ ನವಕರ ನಾಗುತ್ತಿದ್ದೆನು. ಮತ್ತು ನವಕರಿಯಲ್ಲಿ ಸೇರಲೇಬಾರದೆಂಬು ವಷ್ಟು ಉಜ್ವಲವಾದ-ಪ್ರಸಂಗಬಂದರೆ,ಹಿರಿಯರನ್ನೂ ಕೂಡ ಇದುರಿಸುವ ದೇಶಾಭಿಮಾನವು ನನಲ್ಲಿ ಆಗ ಅಂಕುರಿತವಾಗಿ ದ್ದಿಲ್ಲವೆಂಬುದನ್ನು ನಾನು ಒಪ್ಪಲೇಬೇಕು. ನಾನು ವಿದ್ಯಾರ್ಥಿ ದಸೆಯಿಂದ ಗೃಹಂಚಸೆಯ ಇಸ್ವಿಯಲ್ಲಿ ಹೊರಬಿದ್ದಾಗ ಧಾರ ವಾಡದಲ್ಲಿ, ಒಬ್ಬಿಬ್ಬ ವಕೀಲರು ಆರಾಮಕಾಲದಲ್ಲಿ ಮಾಜ್ಮಯ ಚಳವಳಿಯನ್ನು-ಸೇವೆಯನ್ನಲ್ಲ-ಅಲ್ಪಮಟ್ಟಿಗೆ ಮಾಡುತ್ತಿದ್ದ ರೇನೋ ನಿಜ. ಅದೇ ಪ್ರಕಾರ ಕೆಲವು ತರುಣರು ಸಾರ್ವಜ ನಿಕ ಚಟುವಟಿಕೆಗಳನ್ನು ಕೈಕೊಂಡಿದ್ದರೇನೋ ನಿಜ. ಆದರೆ, ಅವರ ಜೀವನದ ಪರಿಣಾಮವು ನನ್ನಮೇಲೆ ಆಗಲಿಲ್ಲವೆಂಬು ದಷ್ಟೇ ಅಲ್ಲ, ಕೆಲಮಟ್ಟಿಗೆ, ವಿಪರೀತವಾಗಿಯೇ ಆಯಿತೆಂದು ಕೂಡ ಹೇಳಬಹುದು. ಇದಕ್ಕೆ ಕಾರಣವೆಂದರೆ, ಆ ಮುಖಂ ಡರು, ಸಾರ್ವಜನಿಕ ಜೀವನವು ಒಂದು ವಿರಾಮಕಾಲದ ಕರ್ಮವೆಂಬ ಭಾವನೆಯಿಂದ ಅದನ್ನು ನಡಿಸಿದ್ದರು. ಗುರು ನಾಥರಾವ ಘಾಟಕ ಮತ್ತು ಭೀಮರಾವ ಕಮಲಾಪುರ ಇವ ರಿಬ್ಬರೇ,ಆಯುಷ್ಯದಲ್ಲಿ ತಮಗೇನೋ ಒಂದು ಗಂಭೀರವಾದ ಕಾರ್ಯ ಮಾಡತಕ್ಕದ್ದಿರುವುದೆಂಬ ಭಾವನೆಯಿಂದ ನಡೆಯು ತ್ತಿದ್ದರು. ಆಗಿನ ಕೆಲ ತರುಣರು ಸಾರ್ವಜನಿಕ ಜೀವನ ವನ್ನು ಉತ್ಕಟವಾಗಿ ಮಾಡುತ್ತಿದ್ದರೂ, ಮೊದಲಿಗೆ ಅವರ ವಿಷಯವಾಗಿ ನನ್ನ ಮನಸ್ಸಿನಮೇಲೆ ಅಷ್ಟೊಂದು ಪರಿಣಾಮ ವಾಗಲಿಲ್ಲವೆಂಬುದನ್ನು ನಾನು ಇಲ್ಲಿ ಹೇಳಲೇಬೇಕು. ಸಿರು

ದ್ಯೋಗಿಗಳಾದವರ ಚಳವಳಿ ಇದು ಎಂದು ಅವರ ವಿಷಯ
ವಾಗಿ ಮುಖಂಡರು ನಮಗೆ ಗ್ರಹಿಕೆಮಾಡಿಕೊಟ್ಟಿದ್ದರು.
ಸಾರಾಂಶ, ೧೯೦೫ನೆಯ ಇಸ್ವಿಯ ಸುಮಾರಿಗೆ ನಾನು ಕರ್ನಾ
ಟಕಕ್ಕೆ ಬಂದಾಗ, ನನ್ನ ಕಣ್ಣೆದುರಿಗೆ ಆದರ್ಶಪುರುಷರೊ
ಬ್ಬರೂ ಇರಲಿಲ್ಲ. ತದ್ವಿರುದ್ಧವಾಗಿ, ನನ್ನನ್ನು ಸಾರ್ವಜನಿಕ
ಸೇವೆಯಿಂದ ಹಿಂಜೆಗ್ಗುವ ಸಂಗತಿಗಳೇ ಕಣ್ಣುಮುಂದೆ
ಕಟ್ಟಿದ್ದವು. ರಾಜಕಾರಣದ ಚಳವಳಿಯು ಶೂನ್ಯವಾಗಿತ್ತು.
ರಾಮಚಂದ್ರ ಹಣಮಂತ ದೇಶಪಾಂಡೆಯವರ ಉತ್ಕಟವಾದ
ಕನ್ನಡದ ಅಭಿಮಾನವು ಕರ್ನಾಟಕ ವಿದ್ಯಾವರ್ಧಕಸಂಘ
ವನ್ನು ಹುಟ್ಟಿಸಿದ್ದರೂ, ನವಕರಿಯಲ್ಲಿ ಇದ್ದ ಅವರು ಧಾರ
ವಾಡಜಿಲ್ಹೆಯನ್ನು ಬಿಟ್ಟುಹೊರಟುಹೋಗಿ ಕೆಲವು ವರುಷ
ಗಳಾಗಿದ್ದರಿಂದ, "ಸಂಘವು" ನಿಸ್ಸಂಗವಾಗಿತ್ತು. ಧಾರವಾಡ
ಜಿಲ್ಹೆಯ ಆಗಿನ ಅನೇಕ ಮುಖಂಡರ ನೈತಿಕಜೀವನವೂ
ವಿಪರೀತವಾಗಿಯೇ ಇತ್ತು. ಹೀಗೆ ರಾಜಕಾರಣದಲ್ಲಿ
ಸಂಪೂರ್ಣ ಕತ್ತಲು; ವಾಙ್ಮಯದ ಜೀವನವು ನಿರ್ಜೀವ
ಜೀವನವು; ಸಾರ್ವಜನಿಕ ಜೀವನವು ನಿಃಸಾರ ಜೀವ
ನವು; ಕರ್ನಾಟಕತ್ವದ ಕಲ್ಪನೆ ಯಾರ ಕನಸುಮನಸಿ
ನಲ್ಲಿ ಕೂಡ ಸ್ಪಷ್ಟವಾಗಿ ಮೂಡಿದ್ದಿಲ್ಲ. ಇಂಥ ಪರಿಸ್ಥಿತಿ
ಯಲ್ಲಿ ನಾನು ಕರ್ನಾಟಕಕ್ಕೆ ಬಂದುದು. ಮೊದಲಿಗೆ, ದೇಶ
ಸೇವೆಗಾಗಿ ನಾನು ಧಾರವಾಡಕ್ಕೆ ಬಂದವನಲ್ಲ. ಹೊಟ್ಟೆ
ಹೊರಕೊಳ್ಳುವುದಕ್ಕಾಗಿ ನಾನು ಇಲ್ಲಿಗೆ ಬಂದವನು. ಆಗ,
ನನ್ನಲ್ಲಿ ಉದಾತ್ತವಾದ ನಿಶ್ಚಿತ ಧ್ಯೇಯಗಳಿರಲಿಲ್ಲ;
ಉಜ್ವಲವಾದ ದೇಶಭಕ್ತಿ ಇರಲಿಲ್ಲ; ನಿಃಸೀಮವಾದ ಸ್ವಾರ್ಥ
ತ್ಯಾಗ ಮಾಡಬೇಕೆಂಬ ಉತ್ಕಟವಾದ ಇಚ್ಛೆ ಇರಲಿಲ್ಲ. ಆಗಿನ

ನನ್ನ ಭಂಡವಲವೆಂದರೆ, ನನ್ನ ಆತ್ಮದ ಮೂಲಶಕ್ತಿ ಮತ್ತು ಆ ಮೂಲಶಕ್ತಿಗೆ ನನ್ನ ಗೃಹಸಂಸ್ಕಾರ ಮತ್ತು ಬಾಹ್ಯ ಸಂಸ್ಕಾರಗಳಿಂದ ದೊರೆತ ಅಸ್ಪಷ್ಟವಾದ ಪುಷ್ಟಿ. ಇವೇ ಮುಂದೆ, ನನ್ನ ಇಡೀ ಜೀವನಕ್ರಮವನ್ನು ಬೇರೊಂದು ದಿಸೆಗೆ ಹಚ್ಚಲಿಕ್ಕೆ ಹೇಗೆ ಕಾರಣೀಭೂತವಾದವೆಂಬುದರ ಇತಿಹಾಸವು ಮನೋರಂಜಕವೂ ಬೋಧಪ್ರದವೂ ಆಗಿದೆ. ಅದನ್ನು ಮುಂದಿನ ಪ್ರಕರಣದಲ್ಲಿ ಉಸುರುವೆ.



೬ನೆಯ ಪ್ರಕರಣ

# ನನ್ನ ಜೀವನಪ್ರವಾಹವು ಉತ್ತರ ವಾಹಿನಿಯಾಯಿತು. (೧೯೦೫-೧೯೦೬)

೧೯೦೫-೬ನೆಯ ಇಸ್ವಿಯ ಸುಮಾರಕ್ಕೆ ನನ್ನ ಜೀವನ ಪ್ರವಾಹವು ಉತ್ತರದಿಸೆಯಲ್ಲಿ ಪ್ರವಹಿಸಲಿಕ್ಕೆ ಪ್ರಾರಂಭವಾಯಿತು. ಹೀಗೆ ನನ್ನ ಜೀವನವು ಉತ್ತರವಾಹಿನಿಯಾಗುವುದಕ್ಕೆ ಯಾವ ಕಾರಣಗಳುಂಟಾದುವೆಂಬುದನ್ನು ಈ ಪ್ರಕರಣದಲ್ಲಿ ವಿವರಿಸುವೆ.

ಮನುಷ್ಯನ ಜೀವಿತದಲ್ಲಿ ಕೆಲವೊಂದು ಕಾಲಕ್ಕೆ ಇಡೀ ಜೀವಿತಪ್ರವಾಹವೇ ಒಂದು ದಿಶೆಯಿಂದ ಬೇರೊಂದು ದಿಶೆಗೆ ಬದಲಾಗುವ ಪ್ರಸಂಗ ಬರುತ್ತದೆ. ಅಂಥದೊಂದು ಕ್ರಾಂತಿ ಬಿಂದುವು ನನ್ನ ಆಯುಷ್ಯದಲ್ಲಿ ನನಗೆ ೧೯೦೫-೬ನೆಯ ಇಸ್ವಿಯಲ್ಲಿ ದೊರೆಯಿತು. ಕೆಲವರಿಗೆ ಕೆಲವೊಂದು ಕ್ಷುದ್ರ ನಿಮಿತ್ತದಿಂದ ಹೀಗೆ ಉಪರತಿಯುಂಟಾದುದನ್ನು ನಾವು ಅನೇಕ ಮಹಾವಿಭೂತಿಗಳ ಚರಿತ್ರೆಗಳಲ್ಲಿ ಓದುತ್ತೇವೆ. ಕೆಲವರಿಗೆ ಪೂರ್ವಜನ್ಮದ ಸಂಸ್ಕಾರದ ಮೂಲಕ ಯಾವ ನಿಮಿತ್ತವೂ ಇಲ್ಲದೆಯೂ ಒಮ್ಮೆಲೆ ಉಪರತಿಯುಂಟಾಗಬಹುದು. ಶ್ರೀಶಂಕರಾಚಾರ್ಯರು ಶ್ರೀಮಧ್ವಾಚಾರ್ಯರೇ ಮುಂತಾದ ಅವತಾರಪುರುಷರ ಜೀವನಗಳು ಅಂಥ ಜೀವನಗಳು. ಅವರು ಹುಟ್ಟಿದಾಗಲೇ ಪರಿಪಕ್ವಬುದ್ಧಿಯುಳ್ಳವರಾಗಿ ಹುಟ್ಟಿದರು. ಪುರಂದರದಾಸ, ರಾಮಾನುಜಾಚಾರ್ಯ, ಬುದ್ಧ, ಬಸವೇ

ಶ್ವರ ಮುಂತಾದ ಕೆಲವು ಮಹಾವಿಭೂತಿಗಳ ಜೀವನದಲ್ಲಿ
ಕೆಲವೊಂದು ಕ್ಷುದ್ರಕಾರಣವು, ಅಲ್ಲಿಯವರೆಗೆ ಗುಪ್ತಗಾಮಿನಿ
ಯಾಗಿ ಹರಿಯುತ್ತಿದ್ದ ಅವರ ಆತ್ಮವಿಕಾಸದ ಹೊಳೆಗೆ ಬಹಿ
ರಂಗವಾದ ಸ್ವರೂಪವನ್ನು ಕೊಟ್ಟಿತು. ಆದರೆ ಈ ರೀತಿ
ಯಾಗಿ, ಆಕಸ್ಮಿಕವಾದ ನಿಮಿತ್ತದಿಂದ ಬದಲಾಗುವವರು
ಅತಿದೊಡ್ಡ ವಿಭೂತಿಗಳು. ಅದಕ್ಕೆ ಹೆಚ್ಚಿನ ಆತ್ಮಯೋಗ್ಯತೆ
ಬೇಕು, ಹೆಚ್ಚಿನ ಪುಣ್ಯ ಬೇಕು. ಮತ್ತೆ ಕೆಲವು ವಿಭೂತಿ
ಗಳ ಜೀವನದಲ್ಲಿ, ಆತ್ಮವಿಕಾಸವು ಸಾವಕಾಶವಾಗಿ ಆಗಿರು
ತ್ತದೆ. ಲೋ. ಟಿಳಕ, ಮಹಾತ್ಮಾ ಗಾಂಧಿ ಮುಂತಾದವರ
ಚರಿತ್ರೆಗಳನ್ನೋದಿದರೆ ಈ ಮಾತು ಸ್ಪಷ್ಟವಾಗುವುದು.
ಇಂಥ ಮಹಾಪುರುಷರು, ಕಾಲವು ಅನುಕೂಲವಿರಲಿ, ಇರ
ದಿರಲಿ ಕಾಲವನ್ನು ತಮ್ಮ ಕ್ರಿಯಾಸತ್ವದ ಬಲದಿಂದ ಅನು
ಕೂಲವಾಗಿ ಮಾಡಿಕೊಂಡು, ತಮ್ಮ ಧ್ಯೇಯವನ್ನು ಸಾಧಿಸಿ
ಕೊಳ್ಳಲಿಕ್ಕೆ ಪ್ರಯತ್ನಿಸುತ್ತಾರೆ. ಅವರ ಅಚಲವಾದ ಧ್ಯೇಯ
ನಿಷ್ಠೆಯು, ಅಖಂಡವಾದ ತಪಶ್ಚರ್ಯವು ಇಡೀ ದೇಶದ ಇತಿ
ಹಾಸವನ್ನು ಹೊಸರೀತಿಯಲ್ಲಿ ಮಾರ್ಪಡಿಸುತ್ತದೆ. ಆದರೆ,
ಈತರಹದ ಯಾವ ಅಲೌಕಿಕ ಉಪರತಿಯನ್ನೂ ಕ್ರಿಯಾಶಕ್ತಿ
ಯನ್ನೂ ವಾಚಕರು ನನ್ನ ಜೀವನದಲ್ಲಿ ಕಾಣಲಾರರು. ಅಂಥ
ದಾವುದನ್ನೂ ಅವರು ನನ್ನ ಜೀವನದಲ್ಲಿ ಅಪೇಕ್ಷಿಸಬಾರದು.
ನನ್ನ ಜೀವನವು ಭೋರ್ಗರೆದು ಹರಿಯುತ್ತಿರುವ ಪ್ರಚಂಡ
ವಾದ ಹೊಳೆಯು ಅಲ್ಲ; ಮಂದವಾಗಿ, ಶಾಂತವಾಗಿ ಹರಿ
ಯುವ ಚಿಕ್ಕದೊಂದು ತೊರೆಯು. ಆದರೂ ನನ್ನ ಜೀವನ
ದಲ್ಲಿ ಉಂಟಾದ ಈ ಕ್ರಾಂತಿಗೆ ನನ್ನಂತೆ ಸ್ವಭಾವವುಳ್ಳವರ
ಆತ್ಮವಿಕಾಸದ ದೃಷ್ಟಿಯಿಂದಲೂ ಕರ್ನಾಟಕದ ದೃಷ್ಟಿ

ಖಿಂದಲೂ ಒಂದು ಬಗೆಯ ಮಹತ್ವವಿದೆ. ಆದುದರಿಂದಲೇ, ಯಃಕಶ್ಚಿತನಾದ ನನ್ನ ಜೀವನಸ್ಮೃತಿಗಳನ್ನು ಕೊಡುವ ಸಾಹಸಮಾಡುತ್ತಿದ್ದೇನೆ; ಆತ್ಮಗೌರವಕ್ಕಾಗಿಯೂ ಅಲ್ಲ, ಕೇವಲ ಉಪಚಾರಕ್ಕಾಗಿಯೂ ಅಲ್ಲ. ಇರಲಿ.

೧೯೦೫-೬ರ ಸುಮಾರಕ್ಕೆ ನಾನು ದೂರದಲ್ಲಿ ಒಂದು ಬೆಳಕನ್ನು ಕಂಡೆ. ಅದು ಬಲು ದೂರದಲ್ಲಿ ಇತ್ತು. ಅತಿ ಚಿಕ್ಕದಾಗಿ ಕಾಣುತ್ತಿತ್ತು; ಮಿಣಿಮಿಣಿಯಾಗಿ ಮಿಂಚುತ್ತಿತ್ತು. ಮಸುಕುಮಸುಕಾಗಿ ಹೊಳೆಯುತ್ತಿತ್ತು. ಕರ್ನಾಟಕದ ಕಗ್ಗತ್ತಲೆಯಲ್ಲಿ ಅದೇ ನನಗೆ ಕಣ್ಣುದೀಪವಾಯಿತು. ಬೆಳಕಿನಲ್ಲಿ ಬೆಳಕಿಗೆ ಬೆಲೆ ಇಲ್ಲ; ಕತ್ತಲೆಯಲ್ಲಿ ಕಿರುದೀಪಕ್ಕೆ ಕೂಡ ಹಿರಿಬೆಲೆ. ನಾನು ಆ ದೂರದ ಬೆಳಕಿನ ಕಡೆ ಎಡವುತ್ತ ಮುಗ್ಗರಿಸುತ್ತ ಸಾಗಿ, ನನ್ನ ಆತ್ಮಕ್ಕೆ ಆ ದೀಪವನ್ನು ಹೊತ್ತಿಸಿಕೊಂಡೆ. ಆಗ ಹೊತ್ತಿಸಿಕೊಂಡ ಅಗ್ನಿಯಿಂದ ನಾನು ಅಗ್ನಿಹೋತ್ರವನ್ನು ಇಂದಿನ ವರೆಗೆ ಇಟ್ಟಿರುವೆ. ಆ ದೀಪಕ್ಕೆ ಹೊತ್ತಿಸಿದ ನನ್ನ ಆತ್ಮದ ಹೂಬತ್ತಿಯನ್ನು ಇಂದಿನ ವರೆಗೆ ಆದಷ್ಟು ಮಟ್ಟಿಗೆ ಆರಿಸಗೊಡದಿರುವುದಕ್ಕೆ ಸತತ ಪ್ರಯತ್ನ ಮಾಡುತ್ತಿರುವೆ. ದೂರದಲ್ಲಿ ಕಾಣುತ್ತಿದ್ದ ದೀಪದಿಂದ ಆತ್ಮಜ್ಯೋತಿಯು ಹೊತ್ತಿದಾಗ ಮಾತ್ರ, ಆತ್ಮವಿಕಾಸದ ದಾರಿ ಕಾಣುತ್ತದೆ. ಆ ಬೆಳಕಿನಗುಂಟ ಸಾಗುವುದೇ ಮನುಷ್ಯನು ಮಾಡತಕ್ಕ ಮುಖ್ಯ ಸಾಧನ. ಬಾಹ್ಯದೃಷ್ಟಿಯು ಅಂತರ್ಮುಖವಾದಾಗ ಮಾತ್ರವೇ ಸಾಧನದ ನಿಜವಾದ ಮರ್ಮವು ಗೊತ್ತಾಗುತ್ತದೆ. ದೇವರ ಗರ್ಭಗುಡಿಯಲ್ಲಿ ಪ್ರವೇಶಿಸುವ ಮುಂಚೆ ಗಂಟೆಗಳನ್ನು ಬಾರಿಸುವುದರ ಉದ್ದೇಶವೂ ಇದೇ. ಗಂಟೆ ಹೊಡೆದ ಕೂಡಲೆ, ಮನಸ್ಸಿನ ಮಿಕ್ಕ ಬಾಗಿಲುಗಳೆಲ್ಲವೂ

ಮುಚ್ಚಬೇಕು. ಆ ಗರ್ಭಗುಡಿಯ ಕತ್ತಲಿನಲ್ಲಿ, ನಮ್ಮ ಆತ್ಮದ ಮಿಣಿಮಿಣಿ ದೀಪದಲ್ಲಿ, ನಮಗೆ ನಮ್ಮ ಧ್ಯೇಯ ಮೂರ್ತಿಯೊಂದೇ ಸದಾ ಕಾಣುತ್ತಿರಬೇಕು. ನಮ್ಮ ಮನದ ಅದೊಂದೇ ಬಾಗಿಲನ್ನು ನಾವು ತೆರೆದಿಟ್ಟು ಮಿಕ್ಕೆಲ್ಲ ವುಗಳನ್ನು ಮುಚ್ಚಿಬಿಡಬೇಕು. ೧೯೦೫-೬ರಲ್ಲಿ ನಾನು ಹಾಗೆ ಬೆಳಕನ್ನು ಕಂಡೆ. ಆ ಬೆಳಕಿನಿಂದ ನನ್ನ ಆತ್ಮದ ಹೂ ಬತ್ತಿಯನ್ನು ಹೊತ್ತಿಸಿಕೊಂಡೆ. ಆ ಹೂಬತ್ತಿಯ ಬೆಳಕಿ ನಲ್ಲಿ ಇಂದಿನವರೆಗೆ ನನ್ನ ಧ್ಯೇಯಮೂರ್ತಿಯನ್ನು ಪೂಜಿ ಸುತ್ತಿರುವೆ, ಆರಾಧಿಸುತ್ತಿರುವೆ.

ಮಹಾಮಹಾ ಪುರುಷರು ಪರಮಾತ್ಮನ ಆ ಗರ್ಭಗುಡಿ ಯಲ್ಲಿ, ತಮ್ಮ ಉಜ್ವಲವಾದ ಆತ್ಮಪ್ರಕಾಶದ ವಿದ್ಯುದ್ದೀಪ ಗಳನ್ನು ಹಚ್ಚಿ, ಪರಮಾತ್ಮನನ್ನು ಕಣ್ಣುತುಂಬಾ ನೋಡುತ್ತಿ ರುವರು. ಆ ಭಾಗ್ಯವು ನನಗೆ ಪ್ರಾಪ್ತವಾಗಿಲ್ಲ, ಈ ಜನ್ಮ ದಲ್ಲಿ ಪ್ರಾಪ್ತವಾಗುವ ಆಶೆಯಿಲ್ಲ ಆದರೂ, ನಾನು ನನ್ನ ಮಿಣಿಮಿಣಿ ಉರಿಯುತ್ತಿರುವ ಹೂಬತ್ತಿಯ ದೀಪದಲ್ಲಿ ನೋಡುತ್ತಿರುವ ಆ ಅಸ್ಪಷ್ಟವಾದ, ಪರಮಾತ್ಮನ ಒಂದು ಚಿಕ್ಕ ಪ್ರತಿಮೆಯಾದ ಕರ್ನಾಟಕದೇವಿಯ ಮೂರುತಿಯೇ ನನಗೆ ಅಪಾರವಾದ ಆನಂದವನ್ನೀಯುತ್ತಿದೆ. ಅಂದ ಬಳಿಕ, ಆ ವಿಶ್ವವ್ಯಾಪಿ ಪರಮಾತ್ಮನ ದಿವ್ಯವಾದ ದರ್ಶನವ ನ್ನು ಸದಾ ಪಡೆಯುತ್ತಿರುವ ಅಪರೋಕ್ಷ ಪುರುಷರು ಎಷ್ಟು ಧನ್ಯರೋ? ಎಷ್ಟು ಮಾನ್ಯರೋ?

ಪರಮಾತ್ಮನಿಗೆ ಅನೇಕ ವಿಧ ವಿಭೂತಿ ರೂಪಗಳುಂಟು. ಅವುಗಳಲ್ಲಿ ಒಂದಕ್ಕೊಂದು ಮಿಗಿಲಾದವು ಇರುತ್ತವೆ. ಅರ್ಜು ನನು ಕಂಡ ವಿಶ್ವರೂಪವು ಇಂಥ ವಿಭೂತಿಗಳಲ್ಲಿ ಎಲ್ಲಕ್ಕೂ

ಹೆಚ್ಚಿನದು. ಅದನ್ನು ನೋಡುವುದಕ್ಕೆ ಚರ್ಮಚಕ್ಷುಗಳು ಸಾಲವು, ದಿವ್ಯಚಕ್ಷುಗಳೇ ಬೇಕು. ಅಂಥ ವಿಶ್ವರೂಪವನ್ನು ನೋಡುವುದಕ್ಕಷ್ಟೆ ಹೀಗೆ ದಿವ್ಯಚಕ್ಷುಗಳು ಬೇಕೆಂತಲ್ಲ; ಪರಮಾತ್ಮನ ಎಂಥ ಚಿಕ್ಕ ವಿಭೂತಿ ರೂಪವನ್ನು ನೋಡುವುದಕ್ಕಾದರೂ ಇಂಥ ಜ್ಞಾನಚಕ್ಷುಗಳೂ ದಿವ್ಯಚಕ್ಷುಗಳೂ ಅಪ್ರಾಕೃತ ಚಕ್ಷುಗಳೂ ಬೇಕೇಬೇಕು. ಅದಕ್ಕೇನೇ ಅಪರೋಕ್ಷ ಜ್ಞಾನವೆನ್ನುತ್ತಾರೆ. ಅದು ಕೇವಲ ಬೌದ್ಧಿಕ ಜ್ಞಾನವಲ್ಲ. ಬರೀ ಬೌದ್ಧಿಕ ಜ್ಞಾನಕ್ಕೆ ಆತ್ಮೋನ್ನತಿಯಲ್ಲಿ ವಿಶೇಷ ಬೆಲೆ ಇಲ್ಲ. ಬೌದ್ಧಿಕ ಜ್ಞಾನವು ಒಂದು ಸಾಧನಮಾತ್ರವು ಕರ್ಮ ಭಕ್ತಿಗಳಿಂದ ಅದು ಪರಿಪೋಷಿತವಾಗಿ ಪರಿಪಕ್ವವಾದಾಗ ಅದು ಅಪರೋಕ್ಷ ಜ್ಞಾನವಾಗುತ್ತದೆ. ಇರಲಿ. ಇಲ್ಲಿ, ನನಗೆ ಹೇಳತಕ್ಕ ಮುಖ್ಯ ಮಾತೇನೆಂದರೆ—ನಾನು ಆಗ ನನ್ನ ಉಪಾಸನಾ ಮೂರ್ತಿಯಾಗಿ ಇಟ್ಟುಕೊಂಡ ವಿಭೂತಿ ರೂಪವು ಬಲುಚಿಕ್ಕದು. ಕರ್ನಾಟಕ ದೇವಿಯೇ ಆ ಚಿಕ್ಕ ಮೂರ್ತಿಯು; ನನ್ನ ಉಪಾಸ್ಯ ದೇವತೆಯು; ಕರ್ನಾಟಕದ ಸರ್ವಾಂಗೀಣ ಉನ್ನತಿಯೇ ನನ್ನ ಆಯುಷ್ಯದ ಧ್ಯೇಯವು. ಅದಕ್ಕಿಂತ ಹೆಚ್ಚಿನ ವಿಭೂತಿಯನ್ನು ನಾನು ಇಟ್ಟುಕೊಂಡಿಲ್ಲ; ಇಟ್ಟುಕೊಳ್ಳುವ ಯೋಗ್ಯತೆ ನನ್ನಲ್ಲಿ ಇಲ್ಲ. ಈ ನನ್ನ ಇಷ್ಟ ದೇವತೆಯ ಮುಖಾಂತರವಾಗಿಯೇ ನಾನು ಸಕಲ, ಪುರುಷಾರ್ಥಗಳನ್ನು ಸಾಧಿಸಲೆತ್ನಿಸಿರುವೆನು. "ಕರ್ನಾಟಕದ ಸರ್ವಾಂಗೀಣ ಉನ್ನತಿ" ಎಂಬೀ ಮೂರು ಶಬ್ದಗಳಲ್ಲಿ ನನ್ನ ಜಗತ್ತೆಲ್ಲವೂ ಅಡಕವಾಗಿದೆ. ಈ ಮೂರು ಪಾದಗಳಿಂದ ನಾನು ತ್ರಿವಿಕ್ರಮನಂತೆ ಮೂರು ಲೋಕಗಳನ್ನು ಆಳಿಯ ಬಲ್ಲೆನು. ಆ ಮೂರು ಜಗತ್ತುಗಳು ಯಾವುವೆಂದರೆ

(೧) ಕರ್ನಾಟಕ, (೨) ಭರತಖಂಡ, (೩) ವಿಶ್ವ. ಕರ್ನಾಟಕದೇವಿಯ ಉಪಾಸನೆಯ ಬಲದಿಂದ ಈ ಮೂರೂ ಜಗತ್ತುಗಳ ಕಲ್ಯಾಣವನ್ನು ಕರ್ನಾಟಕರು ಸಾಧಿಸಬಲ್ಲರೆಂಬ ಭರವಸೆ ಎನಗಿದೆ. ಪರಮಾತ್ಮನ ಯಾವುದೇ ಪ್ರತಿಮೆ ಇರಲಿ, ಎಷ್ಟೇ ಚಿಕ್ಕ ಪ್ರತಿಮೆಯಿರಲಿ, ಅದರಲ್ಲಿ ಪರಮಾತ್ಮನ ವಿಶ್ವಶಕ್ತಿಯೆಲ್ಲವೂ ಅಡಗಿರುತ್ತದೆಂಬ ತತ್ವದ ಮರ್ಮವನ್ನು ಬಲ್ಲವರಿಗೆ ಮಾತ್ರ ಕರ್ನಾಟಕತ್ವವು ಸಂಕುಚಿತವಾದ ಕಲ್ಪನೆಯಾಗಿಲ್ಲವೆಂಬುದು ಗೊತ್ತಾಗುವುದು. ಒಂದು ಹುಲ್ಲುಕಡ್ಡಿಯಲ್ಲಿಯೂ ಪರಮಾತ್ಮನ ವಿಶ್ವಶಕ್ತಿಯನ್ನು, ಸರ್ವಸಾನ್ನಿಧ್ಯವನ್ನು ನಾವು ಕಾಣಬಹುದು. ಅಂದ ಬಳಿಕ ಕರ್ನಾಟಕದೇವಿಯಲ್ಲಿ ನಾವು ಅವನ್ನು ಕಾಣಲಾರೆವೆ ?

ಇಷ್ಟೊಂದು ದ್ರಾವಿಡ ಪ್ರಾಣಾಯಾಮವನ್ನು ಮಾಡಿ ನೀವು ಕೊನೆಗೆ ಹೇಳಿದ್ದೇನು ? "ಕರ್ನಾಟಕದ ಸೇವೆ ಮಾಡುವ ಸಂಕಲ್ಪ ಆ ವರ್ಷ ನಾನು ಮಾಡಿದೆನು" ಎಂಬಿಷ್ಟೇ ಸ್ಪಷ್ಟವಾದ ಸುಲಭವಾದ ಶಬ್ದಗಳಲ್ಲಿ ಅದನ್ನು ಹೇಳಿದ್ದರೆ ಆಗುತ್ತಿತ್ತಲ್ಲವೆ?—ಎಂದು ಇಲ್ಲಿ ಅನೇಕರಿಗೆ ಶಂಕೆ ಉತ್ಪನ್ನವಾಗುವುದು ಸಹಜವಿದೆ. ಅದಕ್ಕೆ ನನ್ನ ಉತ್ತರವೇನೆಂದರೆ, ನನ್ನ ಮಟ್ಟಿಗೆ ಹೇಳುವುದಾದಲ್ಲಿ, ಅಷ್ಟರಿಂದ ನನ್ನ ಧ್ಯೇಯದ ಕಲ್ಪನೆ ಸ್ಪಷ್ಟವಾಗುವುದಿಲ್ಲ. ಆ ಭೌತಿಕ ಭಾಷೆಯಲ್ಲಿ ನನ್ನ ಧ್ಯೇಯದ ಸಂಪೂರ್ಣ ಅರ್ಥವು ಅಡಕವಾಗುವುದಿಲ್ಲ. ಆಧಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕ ಈ ಮೂರೂ ಧ್ಯೇಯಗಳ ಸಮ್ಮಿಶ್ರಣವೇ ಸರ್ವಾಂಗೀಣ ಉನ್ನತಿ ಎಂಬುದು. ನನ್ನ ಕರ್ನಾಟಕವು ಕೇವಲ ಒಂದು ಭೌತಿಕ ಪ್ರದೇಶಮಾತ್ರವಲ್ಲ. ಆದರೆ ಈ ನನ್ನ ಅರ್ಥ

ವನ್ನು ಸ್ಪಷ್ಟಪಡಿಸುವುದಕ್ಕೆ ಈಗ ನಾನು ಯತ್ನಿಸುವುದಿಲ್ಲ. ಅದು ಸ್ವಲ್ಪದರಲ್ಲಿ ಸಾಧ್ಯವಿಲ್ಲ. ನಾನು ಮುಂದೆ ಕೊಡುವ ನನ್ನ ಸ್ಮೃತಿಗಳಲ್ಲಿ ನಾನು ಆ ವಿಷಯವನ್ನು ಹೆಚ್ಚಿಗೆ ಸ್ಪಷ್ಟ ವಾಗಿ ವಿವರಿಸುವವನಿದ್ದೇನೆ. ಅಲ್ಲಿಯವರೆಗೆ ವಾಚಕರು ತಾಳಬೇಕು. ಸದ್ಯಕ್ಕೆ ವಾಚಕರು ನೆನಪಿನಲ್ಲಿಡತಕ್ಕ ಮಾತೇ ನೆಂದರೆ ೧೯೦೫-೬ನೆಯ ಇಸ್ವಿಯ ಸುಮಾರಕ್ಕೆ ನನ್ನ ಜೀವನ ಪ್ರವಾಹವು ಉತ್ತರವಾಹಿನಿಯಾಗಿ ಹರಿಯಹತ್ತಿ ಅದು ಕರ್ನಾಟಕದ ಸರ್ವಾಂಗೀಣ ಉನ್ನತಿಯೆಂಬ ಸಮು ದ್ರದ ಕಡೆಗೆ ಧಾವಿಸಹತ್ತಿತೆಂಬುದು.

ಇಂಥ ದಿವಸವೇ ಆ ಪ್ರವಾಹದ ದಿಶೆಯು ಹೀಗೆ ಬದ ಲಾಯಿತೆಂಬುದನ್ನು ಹೇಳುವುದು ನನಗೆ ಶಕ್ಯವಿಲ್ಲದ್ದರಿಂದ ನಾನು ಆ ದಿವಸವನ್ನು ಹೇಳಿಲ್ಲ. ಕಾಯಿಯು ಹೋಗಿ ಇಂಥ ದಿವಸವೇ ಅದು ಹಣ್ಣಾಗಲಿಕ್ಕೆ ಪ್ರಾರಂಭವಾಯಿತೆಂಬು ದನ್ನು ಯಾರು ನಿಶ್ಚಿತವಾಗಿ ಹೇಳಬಲ್ಲರು? ೧೯೦೫ನೆಯ ಇಸ್ವಿಯಲ್ಲಿ ನಾನು ಮೇ ತಿಂಗಳ ೪ನೆಯ ತಾರೀಖಿನ ದಿವಸ ಆನೆಗೊಂದಿಗೆ ಹೋಗಿದ್ದೆ. ಆ ಆನೆಗೊಂದಿಯ ಆಕಸ್ಮಿಕ ದರ್ಶನವು ಆದ ದಿವಸದಿಂದ ನನ್ನ ವಿಚಾರಕ್ಕೆ ಬೇರೆ ದಿಶೆ ಹತ್ತಿತೆಂದೂ ಅದು ಅನೇಕ ಸಂಗತಿಗಳ ಮೂಲಕ ಪರಿಪಕ್ವವಾಗುವುದಕ್ಕೆ ನಾಲ್ಕೆಂಟು ತಿಂಗಳುಗಳು ಬೇಕಾದ ವೆಂದೂ ಮಾತ್ರ ನಾನು ಸ್ಥೂಲವಾಗಿ ಹೇಳಬಲ್ಲೆನು. ೧೯೦೫ನೆಯ ಇಸ್ವಿಯ ಮೇ ತಿಂಗಳ ೪ನೆಯ ತಾರೀಖೆಂದರೆ ನನ್ನ ಮನದಲ್ಲಿ ಕರ್ನಾಟಕತ್ವದ ಭಾವನೆಯು ಒಡಮೂಡ ಲಿಕ್ಕೆ ಪ್ರಾರಂಭವಾದ ದಿವಸ. ಹಾಗೆಯೇ ಅದು ನನ್ನ ಜೀವನ ದಲ್ಲಿಯ ತಿರುಗಣಿಸ್ಟೇಶನ (Reversing Station) ಎಂದೂ

ಹೇಳಬಹುದು. ಆಗ ನಾನು ಇನ್ನೂ ಎಲ್ ಎಲ್ ಬಿ. ಪಾಸಾಗಿ
ದ್ದಿಲ್ಲ. ಮೇ ತಿಂಗಳ ರಜೆಯಲ್ಲಿ ನನಗೆ ಆನೆಗೊಂದಿಗೆ
ಹೋಗುವ ಪ್ರಸಂಗ ಒದಗಿತು. ಆನೆಗೊಂದಿಯಲ್ಲಿ ನನ್ನ
ಸಮೀಪದ ಆಪ್ತರಾದ ರಾಮರಾವ ಬಲಕುಂದಿ ಇವರು
ಆ ಚಿಕ್ಕ ಸಂಸ್ಥಾನದ ಕಾರಭಾರಿಗಳು. ಆನೆಗೊಂದಿಯು
ಒಂಭತ್ತು ಪ್ರಸಿದ್ಧ ವೈಷ್ಣವಸ್ವಾಮಿಗಳ ನವವೃಂದಾವನ
ಗಳುಳ್ಳ ಸ್ಥಳವು. ನಮ್ಮ ಸಮೀಪದ ಆಪ್ತರೂ ಮನೆತನದ
ಗುರುಗಳೂ ಆದ ಸಮೀರಣಾಚಾರ್ಯ ಪಾಂಶ್ರಿ ಇವರು
ಗಜೇಂದ್ರಗಡಕರ ಬಾಳಾಚಾರ್ಯರೊಡನೆ, ವಹಿವಾಟದಂತೆ
ಆಲೂರಿನಲ್ಲಿ ಬಂದು ನಮ್ಮಲ್ಲಿದ್ದರು. ಅವರು ನನ್ನನ್ನು ಆನೆ
ಗೊಂದೆಗೆ ಕರೆದುಕೊಂಡು ಹೋದರು. ಆಗ ನನಗೆ
ಹಂಪೆಯ ಹತ್ತರವೇ ಆನೆಗೊಂದಿ ಇದೆ ಎಂಬುದೂ ಗೊತ್ತಿ
ರಲಿಲ್ಲ; ಹಂಪೆ ಮತ್ತು ಆನೆಗೊಂದಿಗಳಲ್ಲಿಯೇ ವಿಜಯ
ನಗರದ ಅರಸರಿದ್ದರೆಂಬುದೂ ಗೊತ್ತಿರಲಿಲ್ಲ. ಕರ್ನಾ
ಟಕಕ್ಕೂ ಆ ಹಂಪೆ ಆನೆಗೊಂದಿಗಳಿಗೂ ಏನಾದರೂ ಐತಿ
ಹಾಸಿಕ ಸಂಬಂಧವಿತ್ತೆಂಬುದರ ಅರಿವೂ ನನಗಿರಲಿಲ್ಲ.
ಗದುಗಿನಿಂದ ಎಡವಿಬಿದ್ದರೆ ಅಂದರೆ ಎರಡೇ ಗಂಟೆಗಳ
ಹಾದಿಯಲ್ಲಿ ವಿಜಯನಗರದ ಆ ಭವ್ಯವಾದ ರಾಜ
ಧಾನಿ ಇತ್ತೆಂಬ ಕಲ್ಪನೆಯಂತೂ ಕನಸುಮನಸಿನಲ್ಲಿ ಕೂಡ
ಬಂದಿರಲಿಲ್ಲ. ವಿಜಯನಗರದ ಇತಿಹಾಸವು ಆಗ ನಮಗೆ
ಆಧುನಿಕ ಇತಿಹಾಸವಾಗಿರದೆ,ರಾಮಾಯಣ ಮಹಾಭಾರತದ
ಕಥೆಗಳಂತೆ ಪೌರಾಣಿಕ ಇತಿಹಾಸಮಾತ್ರವೇ ಆಗಿತ್ತು.
ಆದರೆ, ಆ ದಿವಸ ನಾನು ನೋಡುತ್ತೇನೆ ! ನಮ್ಮ ವಿಜಯ
ನಗರವು ಅಲ್ಲಿ ಪ್ರತ್ಯಕ್ಷವಾಗಿಯೂ ವಿಸ್ತಾರವಾಗಿಯೂ ಭವ್ಯ

ವಾಗಿಯೂ ನನ್ನ ಮುಂದೆ ಬಿದ್ದಿದೆ. ಆ ದಿವಸದ ದರ್ಶನವು ನನ್ನ ಮನದಲ್ಲಿ ವಿದ್ಯುತ್ತಿನ ಸಂಚಾರವನ್ನು ಮಾಡಿಸಿತು. ಚಲಚ್ಚಿತ್ರಪಟದಲ್ಲಿ ವಿದ್ಯುದ್ದೀಪದ ಬಲದಿಂದ ಮೂರ್ತಿಗಳು ಮೂಡುವಂತೆ ನನ್ನ ಹೃದಯದಲ್ಲಿ ಕರ್ನಾಟಕದೇವಿಯ ಸುಂದರವಾದ ಮೂರ್ತಿಯು ಒಡನೂಡಹತ್ತಿತು. ಆ ದಿವಸದ ದರ್ಶನವು ನನ್ನ ತಲೆಯಲ್ಲಿ ನಾನಾವಿಧ ತರಂಗಗಳಿಗೆ ಇಂಬುಗೊಟ್ಟಿತು. ಹೃದಯಸಮುದ್ರವು ಅಲ್ಲೋಲಕಲ್ಲೋಲವಾಯಿತು ಆ ದಿವಸವು ನನ್ನ ಜೀವನಕ್ರಮದಲ್ಲಿ ಕ್ರಾಂತಿಯನ್ನು ಮಾಡಲಿಕ್ಕೆ ಕಾರಣವಾಯಿತು. ಆ ದಿನದ ಭಾವನೆಗಳು ಇಂದಿಗೂ ನನ್ನ ಕಣ್ಣಮುಂದೆ ಕಟ್ಟಿವೆ. ಇಂದಿಗೂ ಅವು ನನ್ನ ಚೇತನವನ್ನು ಚೇತರಿಸುತ್ತವೆ. ಅಂದು ನನ್ನ ಹೃದಯಕ್ಕೆ ಸಿಕ್ಕ ಆಘಾತಶಕ್ತಿಯು ಇಂದಿನವರೆಗೆ ನನ್ನ ಜೀವನಪ್ರವಾಹವನ್ನು ಮುಂದೂಡುತ್ತ ಬಂದಿರುವುದು. ಆ ಸಂಸ್ಮರಣೀಯ ದಿನವನ್ನು ನಾನು ಎಂದಿಗೂ ಮರೆಯಲಾರೆ. ಆ ದಿನದ ಸ್ಮೃತಿಯನ್ನು ನಾನು ನನ್ನ “ ಕರ್ನಾಟಕ ಗತ ವೈಭವ ” ಗ್ರಂಥದ ಪ್ರಸ್ತಾವನೆಯಲ್ಲಿ ಸುಮಾರು ೨೪ ವರ್ಷಗಳ ಪೂರ್ವದಲ್ಲಿಯೇ ಉಲ್ಲೇಖಿಸಿಟ್ಟಿರುವೆ.

ಆ ವಿದ್ಯಾರ್ಥಿದಸೆಯಲ್ಲಿ ನನ್ನ ಮನದಲ್ಲಿ ಹುಟ್ಟಿದ ವಿಚಾರತರಂಗಗಳು ಪೂರ್ಣವಾಗಿ ರೂಪಗೊಂಡು, ನನ್ನ ಜೀವನ ಪ್ರವಾಹವನ್ನು ಉತ್ತರದಿಶೆಗೆ ಪ್ರವಹಿಸುವಂತೆ ಮಾಡುವುದಕ್ಕೆ ಮುಂದೆ ಕೆಲವು ತಿಂಗಳುಗಳು ಬೇಕಾದವು. ನಾನು ೧೯೦೫ ನೆಯ ಇಸ್ವಿಯಲ್ಲಿ ಎಲ್‌ಎಲ್. ಬಿ. ಪಾಸಾದಕೂಡಲೆ ಧಾರವಾಡದಲ್ಲಿ ವಕೀಲಿ ಉದ್ಯೋಗವನ್ನು ಪ್ರಾರಂಭಮಾಡಿದೆನು. ಆ ದರೆ, ನನ್ನ ಸುದೈವದಿಂದ ಅದೇ

ವರ್ಷ ವಂಗಭಂಗದ ಪ್ರಚಂಡ ಚಳವಳಿಯ ತೆರೆಗಳು ಭೋರ್ಗರೆದು ಕರ್ನಾಟಕಕ್ಕೆ ದಡದಡ ಬಂದು ಅಪ್ಪಳಿಸಿದವು. ಆಗ, ಆ ದೈವೀಪ್ರೇರಣೆಯಿಂದ ಕರ್ನಾಟಕದಂಥ ಕತ್ತಲು ಗವಿದ ಪ್ರಾಂತದಲ್ಲಿಯೂ ಚೈತನ್ಯವು ಪ್ರಸ್ಫುರಿಸಹತ್ತಿತು. ಅದೂ ನನ್ನ ಜೀವನಪ್ರವಾಹದ ದಿಶೆಯನ್ನು ಬದಲಿಸುವುದಕ್ಕೆ ಬಲುಮಟ್ಟಿಗೆ ಕಾರಣವಾಯಿತು.

ಈ ಬಗೆಯಾಗಿ, ನನ್ನ ಜೀವನಪ್ರವಾಹವನ್ನು ಉತ್ತರವಾಹಿನಿಯಾಗಿ ಹರಿಸುವುದಕ್ಕೆ ಮುಖ್ಯವಾಗಿ ಎರಡು ಕಾರಣ ಳಾದವು (೧) ಆನೆಗೊಂದಿಯ ಆಕಸ್ಮಿಕ ದರ್ಶನ (೨) ವಂಗಭಂಗದ ಪ್ರಚಂಡ ಚಳವಳಿ. ದಕ್ಷಿಣದಲ್ಲಿ ನದಿಗಳು ಬಹುಶಃ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುತ್ತವೆ. ಅವು ಉತ್ತರವಾಹಿನಿಯಾಗಿ ಹರಿಯುವುದು ಅಪರೂಪ. ಮತ್ತು ಹಾಗೆ ಉತ್ತರವಾಹಿನಿಯಾಗಿ ಹರಿಯುವ ಸ್ಥಳಗಳು ಕ್ಷೇತ್ರಗಳೆಂದೆಣಿಸಲ್ಪಡುತ್ತವೆ. ನನ್ನ ಜೀವನ ಪ್ರವಾಹವೂ ಹೀಗೆ ತನ್ನ ಪೂರ್ವದಿಶೆಯನ್ನು ಬದಲಿಸಿ ಬೇರೆ ಬೇರೆ ದಿಸೆಗೆ ಹರಿದು ನನ್ನ ಜೀವನದಲ್ಲಿ ವಿವಿಧ ಕ್ಷೇತ್ರಗಳನ್ನು ಹುಟ್ಟಿಸಿರುವುದರಿಂದ ನಾನು ಈ ಪ್ರಕರಣಕ್ಕೆ ಹಾಗೆ ಹೆಸರು ಇಟ್ಟಿರುವೆನು. ಆ ವಿವಿಧ ಕ್ಷೇತ್ರಗಳು ಯಾವವು, ಅವುಗಳಲ್ಲಿ ನಾನು ಸ್ನಾನಮಾಡಿ ನನ್ನ ಜೀವನವನ್ನು ಹೇಗೆ ಪವಿತ್ರವನ್ನಾಗಿ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಿದೆನೆಂಬುದನ್ನು ಮುಂದೆ ಹೇಳುವೆನು.



೭ನೆಯ ಪ್ರಕರಣ

# ನನ್ನ ಜೀವನದಲ್ಲಿಯ ಕ್ರಾಂತಿಕಾಲ

## ( ೧೯೦೫-೬ )

೧೯೦೫-೬ನೆಯ ಇಸ್ವಿಯಲ್ಲಿ ನನ್ನ ಜೀವನಕ್ರಮದಲ್ಲಿ ಕ್ರಾಂತಿಯಾಗುವುದಕ್ಕೆ ( ೧ ) ಆನೆಗೊಂದಿಯ ಆಕಸ್ಮಿಕ ದರ್ಶನ ಮತ್ತು (೨) ವಂಗಭಂಗದ ಚಳವಳಿ ಇವೆರಡು ಕಾರಣಗಳುಂಟಾದವೆಂದು ಹಿಂದೆ ಹೇಳಿದೆನಷ್ಟೆ. ಇವೆರಡ ರಲ್ಲಿ ವಂಗಭಂಗದ ಚಳವಳಿಯು ಸಾರ್ವತ್ರಿಕವಾದುದರಿಂದ ಮುಂಚೆ ಅದನ್ನು ಕುರಿತು ಹೇಳಿ, ಆನಂತರ ನನಗೆ ಪ್ರತ್ಯಕ್ಷ ವಾಗಿ ಸಂಬಂಧಿಸಿದ ಮೊದಲನೆಯ ಕಾರಣವನ್ನು ಕುರಿತು ಬರೆಯುವೆ.

ವಂಗಭಂಗಚಳವಳಿಯು ಹಿಂದುಸ್ಥಾನದ ರಾಜಕೀಯ ಚಳವಳಿಗಳಲ್ಲಿ ಅತ್ಯಂತ ಮಹತ್ವದ ಮೊದಲನೆಯ ಚಳ ವಳಿಯು. ಈಗಿನ ವಾಚಕರಿಗೆ ಆ ಚಳವಳಿಯ ವಿವರ ಗಳು ಅಷ್ಟೊಂದು ಗೊತ್ತಿರುವ ಸಂಭವವಿಲ್ಲದ್ದರಿಂದ, ಅವರಿ ಗಾಗಿ ಅದರ ಸಾಮಾನ್ಯಸ್ವರೂಪವನ್ನು ವಿವರಿಸಿ, ಆ ಚಳ ವಳಿಯ ಪರಿಣಾಮವು ನನ್ನ ಜೀವನದಮೇಲೆ ಎಷ್ಟರ ಮಟ್ಟಿಗೆ ಆಯಿತೆಂಬುದನ್ನು ಹೇಳುವೆ.

ಲಾರ್ಡ ಕರ್ಝನ್ ಸಾಹೇಬರು ಬಂಗಾಲೀಭಾಷೆಯ ನ್ನಾಡುವವರ ಬಂಗಾಲಪ್ರಾಂತವನ್ನು ಎರಡು ತುಂಡುಗಳ ನ್ನಾಗಿ ಮಾಡಿ, ಬೇರೆ ಬೇರೆ ಎರಡು ಆಡಳಿತಗಳಿಗೆ ಒಳಪಡಿ ಸಿದ್ದರಿಂದ, ಬಂಗಾಲದ ಜನತೆಯಲ್ಲಿ ಕ್ಷೋಭೆಯುಂಟಾಗಿ ಅವರು ಹೂಡಿದ ಮತ್ತು ಮುಂದೆ ಇಡೀ ಹಿಂದುಸ್ಥಾನ

ದಲ್ಲಿಲ್ಲ ಹಬ್ಬಿದ ಚಳವಳಿಗೆ ವಂಗಭಂಗದ ಚಳವಳಿಯೆಂದು ಹೆಸರು. ಬಂಗಾಲಪ್ರಾಂತವು ಅತಿದೊಡ್ಡ ಪ್ರಾಂತವಾದುದ ರಿಂದ, ಅದರಲ್ಲಿಯ ಕೆಲವು ಜಿಲ್ಹೆಗಳನ್ನು ತೆಗೆದು ಅಸಾಮು ಪ್ರಾಂತಕ್ಕೆ ಕೂಡಿಸಬೇಕೆಂದು ಸರಕಾರದವರು ವಿಚಾರ ಮಾಡಿದರು ೧೮೭೪ನೆಯ ಇಸ್ವಿಯಲ್ಲಿಯೇ ಬಂಗಾಲೀ ಭಾಷೆಯನ್ನಾಡುವ ಸಿಲಹತ, ಕಾಚಾರ ಮತ್ತು ಗೋಲ ಪಾರಾ ಈ ಜಿಲ್ಹೆಗಳನ್ನು ಅಸಾಮುಕ್ಕೆ ಕೂಡಿಸಿ, ಅಸಾಮುವು ಪ್ರತ್ಯೇಕಪ್ರಾಂತವಾಗಿ ಮಾಡಲ್ಪಟ್ಟಿತ್ತು. ಆದರೆ ಆಗ ಲೋಕ ಮತವು ಜಾಗೃತವಾಗಿದ್ದಿಲ್ಲವಾದುದರಿಂದ ಬಂಗಾಲಿಗಳಲ್ಲಿ ಚಳವಳಿ ಏಳಲಿಲ್ಲ. ಈ ಅವಧಿಯಲ್ಲಿ ಅಂದರೆ ೧೮೭೪ರಿಂದ ಇತ್ತೀಚಿನ ೩೦ವರುಷಗಳಲ್ಲಿ ಬಂಗಾಲೀ ಜನರಲ್ಲಿ ರಾಷ್ಟ್ರೀಯ ಭಾವನೆ ಬೆಳೆದಿತ್ತು ಆದಕಾರಣ, ಬಂಗಾಲದ ಮತ್ತೆ ಕೆಲವು ಜಿಲ್ಹೆಗಳನ್ನು ಅಸಾಮುಪ್ರಾಂತಕ್ಕೆ ಕೂಡಿಸಬೇಕೆಂಬ ಕಲ್ಪನೆ ಹೊರಟಕೂಡಲೆ ಜನರು ಅದನ್ನು ವಿರೋಧಿಸಹತ್ತಿದರು. ಮುಂಚೆ, ಚಿತಗಾಂಗ, ನವಖಾಲೀ ಮತ್ತು ಟಿಪರಾ ಈ ಮೂರೇ ಜಿಲ್ಹೆಗಳನ್ನು ಅಸಾಮುಕ್ಕೆ ಕೂಡಿಸುವ ವಿಚಾರ ವಿತ್ತು. ಲಾರ್ಡ ಕರ್ಝನರು ವ್ಹಾಯಿಸರಾಯರಾದ ನಂತರ, ಡಾಕಾ ಮತ್ತು ಮೈಮನಸಿಂಗ ಇವೆರಡೂ ಜಿಲ್ಹೆ ಗಳನ್ನು ಹೆಚ್ಚಿಗೆ ಕೂಡಿಸಬೇಕೆಂದು ಗೊತ್ತಾಯಿತು. ಹೀಗೆ ಬಂಗಾಲೀ ಭಾಷೆಯನ್ನಾಡುವ ಜನರ ದೇಹದ ಒಂದೊಂದೇ ಅವಯುವವನ್ನು ಕಡಿದು, ಬಂಗಾಲಿಗಳ ಐಕ್ಯವನ್ನು ಭಂಗ ಮಾಡಹತ್ತಿದ್ದರಿಂದ ಬಂಗಾಲೀಜನರು ರೇಗಿಗೆದ್ದರು. ಆದರೆ, ಅವರ ಸಿಟ್ಟಿಗೆ ಲಾರ್ಡ ಕರ್ಝನರು ಸೊಪ್ಪುಹಾಕಲಿಲ್ಲವೆಂಬು ದಿಷ್ಟೇ ಅಲ್ಲ, ಹುಣ್ಣಿನಮೇಲೆ ಬರೆಕೊಟ್ಟಂತೆ ಫರಿದಪುರ

ಮತ್ತು ಬಾರಿಸಾಲ ಇವೆರಡು ಜಿಲ್ಲೆಗಳನ್ನು ಸಹ ಕತ್ತರಿಸಿ ಹೊಸ ಪ್ರಾಂತಕ್ಕೆ ಕೂಡಿಸುವೆವೆಂದು ಲಾರ್ಡ ಕರ್ಝನ ಸಾಹೇಬರು ೨೦-೭-೧೯೦೫ನೆಯ ಇಸ್ವಿಯ ದಿವಸ ಜಾಹೀರು ಮಾಡಿದರು! ಕೂಡಲೆ, ಬಂಗಾಲವು ಪ್ರಚಂಡವಾದ ಈ ಚಳವಳಿಯನ್ನು ಹೂಡಲು ಸಿದ್ಧವಾಯಿತು.

ಲಾರ್ಡ ಕರ್ಝನರು ಅದಕ್ಕೂ ಮುಂಚೆ ಎರಡು ವರ್ಷಗಳಿಂದ, ಹಿಂದೀ ಜನಮತವನ್ನು ರೇಗಿಗೆಬ್ಬಿಸುವುದಕ್ಕೆ ಅನೇಕರೀತಿಯಿಂದ ಕಾರಣರಾಗಿದ್ದರು. ಅದರಲ್ಲಿಯೂ ಬಂಗಾಲೀ ಜನರಮೇಲೆ ಅವರ ಕಣ್ಣು ವಿಶೇಷ. ೧೯೦೫ನೆಯ ಇಸ್ವಿಯ ಫೆಬ್ರುವರಿ ತಿಂಗಳಿನಲ್ಲಿ ಕಲಕತ್ತೆಯ ಯುನಿವ್ಹರ್ಸಿಟಿಯ ಪದವೀದಾನಸಮಾರಂಭದ ಕಾಲದಲ್ಲಿ ಬಂಗಾಲೀ ವಿದ್ಯಾರ್ಥಿಗಳು ಸತ್ಯಮಾತಾಡುವುದಕ್ಕೆ ಕಲಿಯಬೇಕೆಂದು ಉಪದೇಶಮಾಡಿ, ಪರ್ಯಾಯದಿಂದ ಅಸತ್ಯ ಮಾತಾಡುವವರೆಂದು ಲಾರ್ಡಕರ್ಝನ್ನರು ಅಂದದ್ದರಿಂದ, ಬಂಗಾಲಿಗಳ ಅಪಮಾನಕ್ಕೆ ಕಳಸವನ್ನಿಟ್ಟಂತಾಯಿತು. ಹೀಗೆ ಜನಮತವು ಅತ್ಯಂತ ಕ್ಷುಬ್ಧವಾದ ಕಾಲಕ್ಕೇ ಈ ಬಂಗಾಲದ ಇಬ್ಭಾಗದ ಜಾಹೀರನಾಮೆ ಹೊರಟದ್ದರಿಂದ, ಆ ಪ್ರಕ್ಷೋಭಕ್ಕೆ ಒಳ್ಳೇ ಉಕ್ಕು ಏರಿತು. ಮತ್ತು ಅದು ವಂಗಭಂಗ ಚಳವಳಿಯ ರೂಪದಿಂದ ಹೊರಬಿತ್ತು.

ಬಂಗಾಲದ ಜನರು ಆ ವಿಭಜನೆಯನ್ನು ರದ್ದುಮಾಡಿಸದೆ ಬಿಡಲಿಕ್ಕಿಲ್ಲವೆಂದು ಪ್ರತಿಜ್ಞೆಮಾಡಿದರು. ಮೊದಲು ಹದಿನೈದು ದಿವಸ ವಹಿವಾಟಿಯಂತೆ ನಿಷೇಧಪ್ರದರ್ಶಕ ನಿರ್ಣಯಗಳು ಮಾಡಲ್ಪಟ್ಟು, ಸರಕಾರಕ್ಕೆ ತಂತಿಗಳು ಕಳಿಸಲ್ಪಟ್ಟವು. ದಾದು ಹತ್ತಲಿಲ್ಲ. ಆಗ ೧೯೦೫ನೆಯ ಆಗಸ್ಟ ೭ನೆಯ

ತಾರೀಖಿನ ದಿವಸ, ಕಲಕತ್ತೆಯಲ್ಲಿ ಪ್ರಚಂಡಸಭೆ ನೆರೆದು ವಂಗಭಂಗದ ದಿನವು ತಮ್ಮ ಸೂತಕದ ದಿವಸವೆಂದು ತಿಳಿಯಬೇಕೆಂದು ನಿರ್ಣಯವಾಯಿತು. ಅದೇ ವಂಗಭಂಗ ಚಳವಳಿಯ ಹುಟ್ಟಿದ ದಿನ. ಆ ದಿವಸ ಪಟ್ಟಣದಲ್ಲೆಲ್ಲ ಹರ ತಾಳ ರಾಜರು, ಮಹಾರಾಜರು, ಜಮೀನದಾರರು, ವ್ಯಾಪಾ ರಸ್ಥರು, ಮಾರವಾಡಿಗಳು ಕೂಡ ಈ ಚಳವಳಿಯಲ್ಲಿ ಸೇರಿ ದ್ದೊಂದು ಈ ಚಳವಳಿಯ ವಿಶೇಷ. ಮೋರ್ಲೆಸಾಹೇಬರು ವಂಗಭಂಗವು ವಜ್ರಲೇಪವಾಯಿತು ಎಂದು ಇಂಗ್ಲಂಡದಲ್ಲಿ ಸಾರಿದ್ದರಿಂದ, ಮತ್ತಿಷ್ಟು ನಿರಾಶೆಯಾಯಿತು. ಮತ್ತು ಅದೇ ಸ್ವದೇಶೀ ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣಗಳಿಗೆ ಜನ್ಮ ಕೊಟ್ಟಿತು. ಅರ್ಜಿ, ವಿನಂತಿ, ನಿಷೇಧ ಮುಂತಾದವುಗಳಿಗೆ ಸರಕಾರದವರು ಕಿವಿಗೊಡದಿದ್ದರೆ ಮುಂದೆ ಮಾಡುವುದೇನು ಎಂಬ ವಿಚಾರವು ಸಹಜವಾಗಿಯೇ ಜನರ ಮನದಲ್ಲಿ ಉದ್ಭವಿಸಿತು. ಯಾಚನೆಮಾಡಿ ಉಪಯೋಗವಿಲ್ಲ, ಅಂದ ಬಳಿಕ ನಮ್ಮ ಕಾಲಮೇಲೆ ನಿಲ್ಲಲಿಕ್ಕೆ ಕಲಿಯದೆ ಗತ್ಯಂತರ ವಿಲ್ಲ ಎಂದು ಜನರು ಅನ್ನ ಹತ್ತಿದರು. ಸರಕಾರದ ಕಣ್ಣಿನಲ್ಲಿ ಅಂಜನಹಾಕುವುದಕ್ಕೆ ಬಹಿಷ್ಕಾರವೇ ಮುಖ್ಯ ಉಪಾಯ ವೆಂಬ ಕಲ್ಪನೆ ಹೊರಟಿತು. ಸರಕಾರೀ ಮಾನಸನ್ಮಾನಗಳ ಸರ್ವ ಜಾಗೆಗಳನ್ನು ಬಿಟ್ಟುಕೊಡಬೇಕೆಂದು ವಿಚಾರವಿತ್ತು. ಆದರೆ ಅಂಥ ಅಧಿಕಾರ ಮತ್ತು ಪದವಿಗಳನ್ನು ಸ್ವೀಕರಿಸುವ ಜನರು ಅದಕ್ಕೆ ಸಿದ್ಧರಾಗಲಿಕ್ಕಿಲ್ಲವೆಂದು ತಿಳಿದು ಆ ವಿಚಾ ರವು ಹಿಂದೆ ಇಡಲ್ಪಟ್ಟಿತು. ಮತ್ತು ಬ್ರಿಟಿಶರ ಮಾಲಿನ ಮೇಲೆ ಬಹಿಷ್ಕಾರ ಹಾಕುವ ವಿಚಾರ ಮುಂದೆ ಬಂದಿತು. ಹಾಗೆ ಮಾಡುವುದರಿಂದ, ಬ್ರಿಟಿಶ ವರ್ತಕರ ಕಿಸೆಗೆ ಕತ್ತರಿ

ಬಿದ್ದು, ಅವರು ತಮ್ಮ ಸರಕಾರವನ್ನು ಎಚ್ಚರಿಸುವರೆಂದು ಜನರು ಬಗೆದರು. ಪರದೇಶೀಮಾಲಿನ ಬಹಿಷ್ಕಾರವನ್ನು ಹಾಕುವುದು ಗೊತ್ತಾದ ಕೂಡಲೆ, ಸ್ವದೇಶೀಮಾಲನ್ನು ಹುಟ್ಟಿಸಬೇಕೆಂಬ ವಿಚಾರವು ತಾನಾಗಿಯೇ ಉದ್ಭವಿಸಿತು. ಪದವಿಗಳನ್ನು ಬಿಡುವವರ ಸಂಖ್ಯೆ ಅಲ್ಪ, ಆದರೆ ಈಪ್ರಕಾರದ "ಸ್ವದೇಶಿ ಮತ್ತು ಬಹಿಷ್ಕಾರ"ವನ್ನು ಆಚರಿಸುವುದು ಎಲ್ಲರಿಗೂ ಸಾಧ್ಯ. ಆದಕಾರಣ, ಈ ಚಳವಳಿಯು ಹಾಹಾ ಎನ್ನುವುದರಲ್ಲಿ ದೇಶದಲ್ಲೆಲ್ಲ ಹಬ್ಬಿತು. ಈ ಕಲ್ಪನೆಯು ಇಂಥವರೊಬ್ಬರ ತಲೆಯಲ್ಲಿ ಮುಂಚೆ ಬಂದಿತೆಂಬುದನ್ನು ಹೇಳುವುದು ಕಠಿನ. ಏಕಸಮಯಾವಚ್ಛೇದದಿಂದ, ಆ ಕಲ್ಪನೆ ಬಂಗಾಲದಲ್ಲೆಲ್ಲ ಹಬ್ಬಿತೆಂದು ಮಾತ್ರ ಹೇಳಬಹುದು. ಮುಂದೆ ತುಸು ದಿವಸಗಳಲ್ಲಿ ಅದು ಹಿಂದುಸ್ಥಾನವನ್ನೆಲ್ಲ ಆಕ್ರಮಿಸಿತು.

ಈ ಚಳವಳಿಯಷ್ಟು ಸರ್ವವ್ಯಾಪಕವಾದ ಚಳವಳಿಯು ಬೇರೊಂದಾಗಿಲ್ಲ. ಇದರಲ್ಲಿ,ದೇಶದ ಯಾವತ್ತು ರಾಜಕೀಯ ಪಕ್ಷಪಂಗಡಗಳ ಸಮಾವೇಶವಾಗಿತ್ತು. ರಾಜರ ಮೊದಲ್ಗೊಂಡು ಬಡ ಕೂಲಿಕಾರರ ವರೆಗೆ ಎಲ್ಲರೂ ಈ ಚಳವಳಿಯಿಂದ ಆಕರ್ಷಿತರಾದರು, ಮೋಹಿತರಾದರು. ವಂಗ ಭಂಗದ ಜಾಹೀರನಾಮೆಯು ೭ನೆಯ ಆಗಸ್ಟದ ದಿವಸ ಹೊರಟರೂ ಅದನ್ನು ಪ್ರತ್ಯಕ್ಷವಾಗಿ ಕೃತಿಯಲ್ಲಿ ತರುವ ದಿವಸವು ೧೬-೧೦-೧೯೦೫ ಆಗಿತ್ತು. ೭ನೆಯ ಆಗಸ್ಟದ ದಿವಸ ಪ್ರಾರಂಭವಾದ ಈ ಚಳವಳಿಗೆ ಅಷ್ಟರಲ್ಲಿ ಅದ್ಭುತ ಸ್ವರೂಪವು ಉಂಟಾಗಿತ್ತು. ಆದಕಾರಣ, ಆ ದಿವಸ ಸಭೆ ಕೂಡಿ, ರಕ್ಷಾಬಂಧನ ಮತ್ತು ಉಪೋಷಣ ಮುಂತಾ

ದವುಗಳು ಆಚರಿಸಲ್ಪಟ್ಟವು. ರಕ್ಷಾಬಂಧನವೆಂದರೆ, ಒಬ್ಬರು ಮತ್ತೊಬ್ಬರ ಕೈಯಲ್ಲಿ ರೇಶಿಮೆಯ ನೂಲನ್ನು ಕಟ್ಟುವುದು. ಅದು ಅವರಿಬ್ಬರ ಅಂತಃಕರಣಗಳು ಒಂದಾದುದರ ದ್ಯೋತಕವು.

ಈ ಚಳವಳಿಯ ಅಪ್ರತ್ಯಕ್ಷ ಪರಿಣಾಮಗಳು ಅತ್ಯಂತ ಮಹತ್ವದವಾಗಿವೆ. ಈ ಚಳವಳಿಯು ಪಾಶ್ಚಾತ್ಯ ಸಂಸ್ಕೃತಿಯ ಮೋಹವನ್ನು ದೂರಮಾಡಿ ಪೌರ್ವಾತ್ಯ ಸಂಸ್ಕೃತಿಯ ಕಡೆಗೆ ಮನಸ್ಸನ್ನು ತಿರುಗಿಸಿತು. ಅಲ್ಲಿಯವರೆಗೆ ನಖಶಿಖಾಂತ ಸಾಹೇಬರಂತೆ ಉಡುಪು ತೊಡುತ್ತಿದ್ದ ಬಂಗಾಲೀ ಜನರು ಕೂಡ ತೀರ ಸಾದಾ ಉಡುಪುಗಳನ್ನು ಧರಿಸತೊಡಗಿದರು. ದೇಶದಲ್ಲೆಲ್ಲ ರಾಷ್ಟ್ರೀಯ ಭಾವನೆಯು ಸ್ಫುರಿಸಹತ್ತಿತು. ಇದರ ಮೂಲಕ ಮೂಕರು ವಾಗ್ಮಿಗಳಾದರು. ಬರಹಗಾರರ ಲೆಕ್ಕಣಿಕೆ ಹರಿತವಾಯಿತು. ಕವಿಗಳ ಪ್ರತಿಭೆಗೆ ಪ್ರಕಾಶವುಂಟಾಯಿತು. ಹಳ್ಳಿಪಳ್ಳಿಗಳಲ್ಲಿಯೂ ಲಾವಣಿ ಮುಂತಾದವುಗಳನ್ನು ಮಾಡುವ ಕವಿಗಳು ಉದಯಿಸಿದರು. ಬುದ್ಧಿವಂತರ ಬುದ್ಧಿಗೆ ಚಾಲನ ದೊರೆಯಿತು. ನಾಡನುಡಿಗಳಿಗೆ ನಾದವುಂಟಾಯಿತು. ಇತಿಹಾಸ ಸಂಶೋಧಕರು, ನಮ್ಮ ಉದ್ಯೋಗ ಧಂದೆಗಳನ್ನು ಸರಕಾರದವರು ಹೇಗೆ ಹಾಳು ಮಾಡಿದರೆಂಬುದನ್ನು ಸಂಶೋಧಿಸಿ ತೆಗೆದರು. ಜನರು ಹೊಸಹೊಸ ಉದ್ಯೋಗ ಧಂದೆಗಳನ್ನು ಪ್ರಾರಂಭಿಸಿದರು. ಜನರ ಹುಗಿದಿಟ್ಟ ಹಣವು ಹೊರಬರಹತ್ತಿತು. ದೊಡ್ಡದೊಡ್ಡ ಕಾರಖಾನೆಗಳು ಹೊರಡಲಾರಂಭಿಸಿದವು. ಅಂಜುಬುರುಕರು ಧೈರ್ಯವಂತರಾದರು. ಹೇಡಿಗಳು ಶೂರರಾದರು. ಮುದುಕರು ಹರೆಯದವರಾದರು. ಹುಡುಗರು ಹುರುಪಿನವರಾದರು.

ಸ್ವಾರ್ಥತ್ಯಾಗಬುದ್ಧಿಯು ಅಂಕುರಿಸಿತು. ಸರ್ವಕಲೆ ಗಳಿಗೂ ಉತ್ತೇಜನ ದೊರೆಯಿತು. ಒಟ್ಟಿಗೆ ಈ ಚಳವಳಿಯು ರಾಷ್ಟ್ರದೇವಿಯ ಸರ್ವಾಂಗಗಳಲ್ಲಿ ಚೈತನ್ಯವನ್ನು ತುಂಬಿತು. ಈ ಚಳವಳಿಯು ಅಲ್ಪಾವಧಿಯಲ್ಲಿ ಇಡೀ ಭರತಖಂಡ ವನ್ನು ವ್ಯಾಪಿಸಿತು. ಹೀಗೆ ವಂಗಭಂಗ ಚಳವಳಿಗೆ ವಿಸ್ತೃತ ಸ್ವರೂಪವುಂಟಾದಾಗಿನಿಂದ ಅದಕ್ಕೆ 'ಸ್ವದೇಶೀ ಚಳವಳಿ' ಎಂಬ ವ್ಯಾಪಕವಾದ ಹೆಸರು ಪ್ರಾಪ್ತವಾಯಿತು. ಈ ಸ್ವದೇಶಿ ಚಳವಳಿಯೆಂದರೆ ಹಿಂದುಸ್ಥಾನದ ಮರುಭೂಮಿಯ ಮೇಲೆ ಪರಮಾತ್ಮನ ಕೃಪೆಯಿಂದ ಬಿದ್ದ ಮೊದಲನೆಯ ದೊಡ್ಡ ಮಳೆಯೆಂದು ಹೇಳಬಹುದು. ಅದು ಇಡೀ ರಾಷ್ಟ್ರ ವನ್ನು ತೋಯಿಸಿಬಿಟ್ಟಿತು. ಆದರಿಂದ, ನನ್ನ ಜೀವನ ದಲ್ಲಿಯೂ ಹಲವು ಝರಿಗಳು ಹೊರಟವು. ಸಾರಾಂಶ, "ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಂ" ಎಂಬಂತೆ ಪರಮಾತ್ಮನ ಕೃಪೆಯು ಯಾವ ಅದ್ಭುತ ಪರಿಣಾಮವನ್ನುಂಟುಮಾಡಲಿಕ್ಕಿಲ್ಲ?

ವಂಗಭಂಗ ಚಳವಳಿಯು ಬಂಗಾಲದಲ್ಲಿ ಪ್ರಾರಂಭ ವಾದದ್ದೊಂದೇ ತಡ, ಲೋ. ಟಿಳಕರು ಕೂಡಲೆ ಅದನ್ನು ಎತ್ತಿ ಹಿಡಿದರು. ಆದರಿಂದ ಮಹಾರಾಷ್ಟ್ರ ಮತ್ತು ಕರ್ನಾಟಕ ಗಳಲ್ಲಿ ವಿಲಕ್ಷಣ ಜಾಗೃತಿಯುಂಟಾಯಿತು. ನಾನು ಅದೇ ವಕೀಲಿ ಪರೀಕ್ಷೆ ಪಾಸಾಗಿದ್ದೆ. ಧಾರವಾಡಕ್ಕೆ ಬರುವಾಗ ಶಾಲೆಕಾಲೇಜುಗಳ ಸಾರ್ವಜನಿಕ ಸಂಸ್ಕಾರಗಳನ್ನೂ ತಂದೆ ತಾಯಿಗಳ ಗೃಹಸಂಸ್ಕಾರಗಳನ್ನೂ ತಲೆಯಲ್ಲಿ ಕಟ್ಟಿಕೊಂಡು ಬಂದಿದ್ದೆ. ವಕೀಲನಾದೊಡನೆ ನನ್ನ ಮುಂದಿನ ಮೊದಲ ನೆಯ ಪ್ರಶ್ನೆಯೆಂದರೆ ನಾನು ವಕೀಲಿಯನ್ನು ಎಲ್ಲಿ ಮಾಡ

ಬೇಕೆಂಬುದು. ನಮ್ಮ ಆಲೂರು ಗದಗಿಗೆ ಸಮೀಪವಿರುವುದ
ರಿಂದ, ಸ್ವಾಭಾವಿಕವಾಗಿಯೇ ಅಲ್ಲಿ ವಕೀಲಿ ಪ್ರಾರಂಭಿಸ
ಬೇಕಾಗಿತ್ತು. ಆದರೆ ನಮ್ಮ ತಂದೆಯವರಿಗೆ ನಾನು ಒಬ್ಬ
ದೊಡ್ಡ ವಕೀಲನಾಗಬಹುದೆಂಬ ಆಶೆ ಇತ್ತು. ಆದಕಾರಣ,
ಅವರು ನನಗೆ ಧಾರವಾಡದಲ್ಲಿ ವಕೀಲಿಯನ್ನು ಮಾಡಲಿಕ್ಕೆ
ಹೇಳಿದರು. ನನಗೂ ಅದೇ ಬೇಕಾಗಿತ್ತು. ಧಾರವಾಡದಂಥ
ದೊಡ್ಡ ಪಟ್ಟಣದಲ್ಲಿದ್ದರೆ, ಸಾರ್ವಜನಿಕ ಚಟುವಟಿಕೆಗಳಿಗೆ
ಹೆಚ್ಚು ಅನುವು ದೊರೆಯಬಹುದೆಂದು ನಾನು ಬಗೆದೆನು.
ಆದ ಕಾರಣ ಧಾರವಾಡದಲ್ಲಿ ವಕೀಲಿಯನ್ನು ಪ್ರಾರಂಭಿಸಿದೆ.
ಆಗ ವಕೀಲಿಯನ್ನು ಬಿಡಬೇಕೆಂಬ ವಿಚಾರವು ಇನ್ನೂ ತಲೆ
ದೋರಿದ್ದಿಲ್ಲ. ವಕೀಲಿಯನ್ನು ಬಿಡದೆ, ಯಾವತ್ತು ಚಟು
ವಟಿಕೆಗಳಲ್ಲಿ ಭಾಗ ತೆಗೆದುಕೊಳ್ಳಲಿಕ್ಕೆ ಆಗ ಅವಕಾಶವಿತ್ತು.
ಏಕೆಂದರೆ, ಆಗ ವಕೀಲರಿಗೆ ಹೊಟ್ಟೆಯ ಚಿಂತೆ ಉಂಟಾಗು
ತ್ತಿರಲಿಲ್ಲ. ವಕೀಲನಾದ ಕೂಡಲೆ ಸಾಮಾನ್ಯವಾಗಿ ಒಂದೆ
ರಡು ವರ್ಷಗಳಲ್ಲಿ ೩೦೦-೪೦೦ ರೂಪಾಯಿಗಳನ್ನು ಗಳಿ
ಸುವ ವಕೀಲರ ಸುವರ್ಣಯುಗವು ಆಗಿಹೋಗಿದ್ದರೂ
ಸಾಮಾನ್ಯವಾಗಿ ೧೦೦-೨೦೦ ರೂಪಾಯಿಗಳು ದೊರೆಯು
ವುದಕ್ಕೇನೂ ಯಾರಿಗೂ ‘ ದದಾತಿ ’ ಇರಲಿಲ್ಲ. ನಮ್ಮ
ಹಿರಿಯರು ಹತ್ತು ವರ್ಷ ಶಿರಸ್ತೆ ಕೆಲಸ ಮಾಡಿದ ನವಲ
ಗುಂದವು ಧಾರವಾಡದ ಕೋರ್ಟಿನ ಹದ್ದಿನೊಳಗೆ ಇದ್ದ
ಕಾರಣ, ನನಗಂತೂ ವಿಶೇಷ ಅನುಕೂಲತೆಯುಂಟಾಯಿತು.
ಅಲ್ಲದೆ, ವಕೀಲೀ ಉದ್ಯೋಗದ ದೊಡ್ಡ ಲಾಭವೆಂದರೆ,
ಶ್ರಮಕ್ಕಿಂತ ಹತ್ತು ಪಟ್ಟು ಹೆಚ್ಚಿಗೆ ಹಣ ದೊರೆಯುವುದು.
ತಿಂಗಳಿನಲ್ಲಿ ೪-೮ ದಿವಸ ದುಡಿದರೆ ಸಾಕು, ಕಿಸೆಯು

ತುಂಬುತ್ತಿತ್ತು. ಆದುದರಿಂದಲೇ ಎಲ್ಲ ಕಡೆಗೂ ಎಲ್ಲ ಚಳವಳಿಗಳಲ್ಲಿಯೂ ವಕೀಲರೇ ಮುಖಂಡರಾಗುತ್ತಿದ್ದರು. ಇವೆಲ್ಲ ಕಾರಣಗಳ ಮೂಲಕ, ಮುಂಚೆ ನನ್ನ ಮನಸ್ಸಿನಲ್ಲಿ ವಕೀಲಿಯನ್ನು ಬಿಡುವುದು ಬರಲಿಲ್ಲ.

ನನ್ನ ವಿದ್ಯಾರ್ಥಿದಸೆಯ ಕಾಲದಲ್ಲಿ ಅಭ್ಯಾಸದ ಕಡೆಗೆ ಇಲ್ಲಿಯ ವಿದ್ಯಾರ್ಥಿಗಳ ಲಕ್ಷ್ಯ ಕಡಿಮೆ. ಹಿಂದೆ ಹೇಳಿದಂತೆ, ಪಾಸಾಗುವುದೊಂದೇ ಆಗಿನ ವಿದ್ಯಾರ್ಥಿಗಳ ಮಹತ್ವಾಕಾಂಕ್ಷೆ. ತುಸು ಬುದ್ಧಿವಂತ ಹುಡುಗನಿಗೆ ಅದು ಸುಲಭ ಸಾಧ್ಯ. ಆದಕಾರಣ, ನನಗೆ ಬಾಲವಿದ್ಯಾರ್ಥಿದಸೆಯಲ್ಲಿ ಆಗಿನ ಚಟುವಟಿಕೆಗಳಲ್ಲಿ ಭಾಗತೆಗೆದುಕೊಳ್ಳಲು ಅನುವು ದೊರೆಯಿತು. ಮುಂದೆ ನಾನು ಪ್ರೌಢ ವಿದ್ಯಾರ್ಥಿದಸೆಗೆ ಬಂದಾಗ, ದೇಶದಲ್ಲೆಲ್ಲ ಪ್ಲೇಗು ಅತಿಶಯ ಜೋರಾದ ಕಾರಣ, ವರ್ಷದಲ್ಲಿ ಮೂರು ನಾಲ್ಕು ತಿಂಗಳು ಮಾತ್ರ ಕಾಲೇಜಿನ ತಾಪ. ಮಿಕ್ಕ ಕಾಲದಲ್ಲಿ, ನಮಗೆ ಮನಬಂದಂತೆ ವಿಹರಿಸಲು ಅನುಕೂಲತೆ ಇತ್ತು. ಹೀಗೆ ಮೊದಲಿನಿಂದಲೂ ಒಂದಿಲ್ಲೊಂದು ಕಾರಣಕ್ಕೋಸ್ಕರ ಬಿಡುವು ದೊರೆತು, ಸಾರ್ವಜನಿಕ ಜೀವನದ ರುಚಿ ಹತ್ತಿದ್ದರಿಂದ, ನಾನು ಧಾರವಾಡದಲ್ಲಿ ವಕೀಲಿ ಮಾಡಹತ್ತಿದರೂ, ಚಟುವಟಿಕೆಗಳನ್ನು ನಡಿಸುವುದಕ್ಕೇನೂ ಅಡ್ಡಿಯಾಗಲಿಲ್ಲ. ಆದರೂ, ವಂಗಭಂಗ ಚಳವಳಿಯು ನನ್ನ ಮನಸಿಗೆ ಸುಮ್ಮನಿರಗೊಡಲಿಲ್ಲ. ಕೋರ್ಟಿನಲ್ಲಿ ಕೆಲಸವು ವಿಶೇಷವಿಲ್ಲದಿದ್ದರೂ ನಿತ್ಯ ಸಂಜೆಯ ವರೆಗೆ ಕಾಯುತ್ತ ಕುಳಿತುಕೊಳ್ಳಬೇಕಾದುದರಿಂದ, ನನ್ನ ಆಯುಷ್ಯವೆಲ್ಲವೂ ವ್ಯರ್ಥವಾಗಿ ಹಾಳಾಗುತ್ತದೆಂದು ತೀಕ್ಷ್ಣವಾಗಿ ಅನಿಸಹತ್ತಿತು. ಮತ್ತು ವಕೀಲಿಯನ್ನು ಬಿಟ್ಟೇಬಿಡ

ಬಾರದೇಕೆ ಎಂಬ ವಿಚಾರವು ತಲೆಯನ್ನು ತಿನ್ನಹತ್ತಿತು. ಆದರೆ ಸ್ವದೇಶೀ ಚಳವಳಿಯು ಎಷ್ಟೇ ಜೋರಿನಲ್ಲಿದ್ದರೂ, ಧಾರವಾಡಕ್ಕೆ ಆದರ ತೆರೆಗಳು ಬಲವಾಗಿ ಬಂದು ಅಪ್ಪಳಿಸಿರಲಿಲ್ಲ. ಸಾಯಂಕಾಲಕ್ಕೆ ಸಾರ್ವಜನಿಕ ಸಭೆಗಳನ್ನು ಮಾಡಿದರೆ ಸಾಕಾಗುತ್ತಿತ್ತು. ಆದಕಾರಣ ವಕೀಲಿಯನ್ನು ಬಿಟ್ಟು ಮಾಡಬೇಕೇನು ಎಂಬ ಪ್ರಶ್ನೆಗೆ ನನಗೆ ಉತ್ತರ ಸಿಕ್ಕುತ್ತಿರಲಿಲ್ಲ. ಆದರೆ ಈ ಚಳವಳಿಯು ನನ್ನ ಜೀವನ ಕ್ರಮದಲ್ಲಿ ಮಾತ್ರ ತತ್ಕಾಲಕ್ಕೆ ಅತಿ ದೊಡ್ಡ ಮಾರ್ಪಾಟು ಮಾಡಿತು. ನಾನು ಒಮ್ಮೆಲೆ ಗಂಭೀರಮುದ್ರೆಯವನಾದೆನು. ಆಟನೋಟಗಳಲ್ಲಿ ಕಾಲಕಳೆಯುವುದು ವ್ಯರ್ಥವೆಂದೆನಿಸ ತೊಡಗಿತು. ಆಗಿನ ವಕೀಲರ ವಿಲಾಸ-ವಿನೋದಗಳು ರುಚಿಸದಂತಾದವು. ಅವರ ಬೆಡಗಿನ ಉಡುಪುಗಳು ಬೇಡಾದವು. ಸ್ವದೇಶಿ ಚಳವಳಿಯು ಇವೆಲ್ಲ ಮಾರ್ಪಾಟುಗಳಿಗೆ ಅನುಕೂಲತೆಯನ್ನು ಕಲ್ಪಿಸಿಕೊಟ್ಟಿತು. ಸ್ವದೇಶಿ ಸಕ್ಕರೆ ಆಗ ಸಿಕ್ಕುತ್ತಿರಲಿಲ್ಲವಾದಕಾರಣ, ಚಹಕಾಫಿಗಳನ್ನು ಬಿಟ್ಟುಕೊಟ್ಟೆ; ಪರದೇಶಿ ಬಟ್ಟೆಗಳಿಗೆ ಬಹಿಷ್ಕಾರಹಾಕಬೇಕಾದುದರಿಂದ, ಸಾದಾ ಉಡುಪನ್ನು ತೊಟ್ಟೆ. ಹೀಗೆ ಸ್ವದೇಶಿ ಚಳವಳಿಯ ಗಂಗೆಯಲ್ಲಿ ಸ್ನಾನಮಾಡಿ ಪವಿತ್ರನಾದೆ. ಸ್ವದೇಶಿ ಚಳವಳಿಯು ನನ್ನ ಪರಿಶುದ್ಧ ನೈತಿಕ ಆಚರಣೆಗೆ ಪುಷ್ಟಿಕೊಟ್ಟಿತು. ಧಾರ್ಮಿಕ ಭಾವನೆಗೆ ಬೆಂಬಲ ಕೊಟ್ಟಿತು. ವಿಚಾರಶೀಲ ಸ್ವಭಾವಕ್ಕೆ ಚಾಲನೆಕೊಟ್ಟಿತು.

ಇವೆಲ್ಲ ಸಾಮಾನ್ಯಪರಿಣಾಮಗಳಾದವು. ಆದರೆ ಈ ಚಳವಳಿಯಿಂದ ನನ್ನಮನಸ್ಸಿನಮೇಲೆ ಉಂಟಾದ ವಿಶಿಷ್ಟಪರಿಣಾಮವೆಂದರೆ, ಬಂಗಾಲವು ಎರಡೇ ಭಾಗಗಳಾಗಿ ಮಾಡಲ್ಪ

ಟ್ಟರೆ ಬಂಗಾಲಿಗಳು ಇಷ್ಟು ವಿಲಕ್ಷಣವಾದ ಚಳವಳಿಯನ್ನು ಮಾಡುತ್ತಿರಲು, ಹರಿದು ಹರಪಡಿಯಾಗಿಹೋದ ನನ್ನ ಕರ್ನಾಟಕವು ಇನ್ನೂ ಎಚ್ಚತ್ತಿಲ್ಲವಲ್ಲಾ ಎಂಬ ವಿಚಾರವು ನನಗೆ ನಿದ್ದೆಮಾಡಗೊಡಲಿಲ್ಲ ಕರ್ನಾಟಕವು ಘೋರನಿದ್ರೆ ಮಾಡುತ್ತಿರುವುದಕ್ಕೆ ಅದು ಒಡೆದು ತುಂಡಾಗಿರುವುದೇ ಮುಖ್ಯ ಕಾರಣವೆಂಬ ಕಲ್ಪನೆಯು ಆಗ ನನ್ನ ಮನಸ್ಸಿನಲ್ಲಿ ಝುಗ್ಗನೆ ಮಿಂಚಿನಂತೆ ಹೊಳೆಯಿತು. ನನ್ನಲ್ಲಿ ಆ ಮಿಂಚು ಮಾಯವಾಗಲಿಲ್ಲ. ಅದೇ ನಾನು ಕಂಡ ಹೊಸ ಬೆಳಕು. ಸುತ್ತಲು ಮುಸುಕಿದ ಕತ್ತಲಿನಲ್ಲಿ ನನಗೆ ಕಂಡ ಪ್ರಕಾಶವೆಂದರೆ ಇದೇ. ಈ ಕಲ್ಪನೆಯೇ ನನ್ನನ್ನು ಸ್ವಾರ್ಥ ತ್ಯಾಗ ಮಾಡುವುದಕ್ಕೆ ಹಚ್ಚಿತು; ಈ ಕಲ್ಪನೆಯೇ ನಾನು ಕರ್ನಾಟಕವನ್ನಷ್ಟೇ ಕಾರ್ಯಕ್ಷೇತ್ರವನ್ನಾಗಿ ಇಟ್ಟುಕೊಳ್ಳಲಿಕ್ಕೆ ಮೂಲ ಕಾರಣವಾಯಿತು; ಈ ಕಲ್ಪನೆಯೇ ನನಗೆ ಕರ್ನಾಟಕದ ಹುಚ್ಚುಹಿಡಿಸಿತು.

೪-೫-೧೯೦೫ನೆಯ ಇಸ್ವಿಯ ದಿವಸ ಆದ ಆನೆಗೊಂದಿಯ ದರ್ಶನವು ಅಂದಿನಿಂದ ನನ್ನ ಮನದಲ್ಲಿ ಅನೇಕ ವಿಚಾರ ತರಂಗಗಳನ್ನು ಎಬ್ಬಿಸುತ್ತಿತ್ತು; ಜಿಜ್ಞಾಸೆಯ ಕಿರಣಗಳನ್ನು ಬೀರುತ್ತಿತ್ತು. ಅದರ ಮೂಲಕ, ನಾನು ಒಮ್ಮೆ ಮಹತ್ವಾಕಾಂಕ್ಷೆಯ ಶಿಖರಕ್ಕೆ ಏರುತ್ತಿದ್ದೆ; ಮತ್ತೊಂದು ಕ್ಷಣದಲ್ಲಿ, ನಿರಾಶೆಯ ಪಾತಾಳಕ್ಕೆ ಇಳಿಯುತ್ತಿದ್ದೆ. ಆ ವಿಚಾರತರಂಗಗಳು ಜಲಪಾತಗಳಾಗಿ ಪರಿಣಮಿಸಿ, ನನ್ನ ಚಿತ್ತವನ್ನು ಘೋರವಾದ ಕಂದರದಲ್ಲಿ ಕೆಡಹುತ್ತಿದ್ದವು. ಆಶೆಯ ಬುಗ್ಗೆಗಳೂ ನಡುನಡುವೆ ತಲೆದೋರುತ್ತಿದ್ದವು; ಕ್ಷಣಾರ್ಧದಲ್ಲಿ ಅಡಗುತ್ತಿದ್ದವು. ಇಂಥ ಸಂದರ್ಭದಲ್ಲಿಯೇ ವಂಗಭಂಗ ಚಳ

ವಳಿಯು ಹುಟ್ಟಿದ್ದರಿಂದ, ಕರ್ನಾಟಕಭಂಗವು ನನ್ನ ಕಣ್ಣ ಮುಂದೆ ನಿಚ್ಚಳವಾಗಿ ಕಟ್ಟಿತು. ಮತ್ತು ಇವೆರಡುಗಳ ಪರಿಣಾಮವಾಗಿ ನಾನು ಕರ್ನಾಟಕದ ಸೇವೆಯನ್ನು ಮಾಡುವುದನ್ನು ಗೊತ್ತುಪಡಿಸಿದೆನು. ಸಾರಾಂಶ, ನಾನು ಕಾಲೇಜ ಬಿಟ್ಟು ಹೊರಗೆ ಬಂದಕೂಡಲೆ ನನ್ನ ಕರ್ನಾಟಕವನ್ನು ವಿಹಂಗಮದೃಷ್ಟಿಯಿಂದ ನಿರೀಕ್ಷಿಸಿದೆ. ಆಗ, 'ಕರ್ನಾಟಕ'ವು ಇನ್ನೂ ಹುಟ್ಟಿದ್ದಿಲ್ಲವಾದಕಾರಣ, ಅದು ನನಗೆ ಕಾಣಿಸಲೇ ಇಲ್ಲ. ಆದಕಾರಣ, ಅದನ್ನು ಮುಂಚೆ ನನ್ನ ಹೃದಯದಲ್ಲಿ ಮೂಡಿಸಿಕೊಂಡೆ. ಹೀಗೆ ನನ್ನ ಹೃದಯದಲ್ಲಿ ಒಡಮೂಡಿದ ಆ ಕರ್ನಾಟಕದೇವಿಯ ಮೂರ್ತಿಯ ಸೇವೆಯನ್ನು ಮಾಡುವುದನ್ನು ನಿರ್ಧರಿಸಿದೆ. ಈ ಬಗೆಯಾಗಿ ಕರ್ನಾಟಕದೇವಿಯ ಮೂರ್ತಿಯನ್ನು ನನ್ನ ಹೃದಯದಲ್ಲಿ ಒಡಮೂಡಿಸಿದ್ದೇ ಅವೆರಡೂ ಸಂಗತಿಗಳಿಂದಾದ ಮುಖ್ಯ ಪರಿಣಾಮ.



೭ನೆಯ ಪ್ರಕರಣ

# ನನ್ನ ಜೀವನದ ಧ್ಯೇಯ-ಧೋರಣೆಗಳು ನಿಶ್ಚಿತವಾದವು (೧೯೦೫-೬)

೧೯೦೫ನೆಯ ಇಸ್ವಿಯ ಮೇ ತಿಂಗಳ ೪ನೆಯ ತಾರೀಖು ನನ್ನ ಜೀವನದ ಕ್ರಾಂತಿಬಿಂದುವು; ಆ ದಿನವು ನನ್ನ ಜೀವನ ಪ್ರವಾಹದ ತಿರುಗಣಿಸುತ್ತು—ಎಂಬುದಾಗಿ ಹಿಂದೆ ಹೇಳಿದೆನಷ್ಟೆ. ಆದೂ ವಂಗಭಂಗವೂ ನನ್ನ ಜೀವನದ ಧ್ಯೇಯ ಧೋರಣೆಗಳನ್ನು ನಿಶ್ಚಯಿಸಲಿಕ್ಕೆ ಹೇಗೆ ಕಾರಣೀಭೂತವಾದವೆಂಬುದನ್ನೂ ಆ ಧ್ಯೇಯ-ಧೋರಣೆಗಳ ಸಾಮಾನ್ಯ ಸ್ವರೂಪವನ್ನೂ ಇಲ್ಲಿ ಹೇಳುವೆ. ಆನೆಗೊಂದಿಯ ಆ ನೋಟವು ನನ್ನಲ್ಲಿಯ ಕರ್ನಾಟಕದ ಕಣ್ಣನ್ನು ತೆರೆಯಿಸಿತು. ಅಲ್ಲಿಯ ವರೆಗೆ ನನಗೆ ಕರ್ನಾಟಕದ ಬಗ್ಗೆ ತೀಕ್ಷ್ಣವಾದ ಅಭಿಮಾನವು ಹುಟ್ಟಿರಲಿಲ್ಲ. ಕಾಲೇಜದಲ್ಲಿ, ಮರಾಟಿಗರು ತಮ್ಮ ಭಾಷೆಯ ಅಭಿಮಾನ ಹಿಡಿಯುತ್ತಾರೆ, ಅದಕ್ಕೆ ನಾವೂ ನಮ್ಮ ಭಾಷೆಯ ಅಭಿಮಾನ ಹಿಡಿಯಬೇಕು, ಎಂಬುದಷ್ಟೇ ಆಗಿನ ನನ್ನ ವಿಚಾರ. ಅದು ಆಳವಾದ ವಿಚಾರವಾಗಿರಲಿಲ್ಲ, ಮೇಲೆಮೇಲೆ ತೇಲುವ ವಿಚಾರ ಮಾತ್ರವೇ ಆಗಿತ್ತು. ಆದರೆ ಆನೆಗೊಂದಿಯ ಅಂದಿನ ನೋಟವು ಕರ್ನಾಟಕದ ಬಗ್ಗೆ ಗಹನವಾಗಿ ವಿಚಾರ ಮಾಡುವುದಕ್ಕೆ ನನ್ನನ್ನು ಹಚ್ಚಿತು. ಕರ್ನಾಟಕದ ಬಗ್ಗೆ

ಕನ್ನಡಿಗರಲ್ಲಿ ಆಳವಾದ ಅಭಿಮಾನವಿಲ್ಲದಿರುವುದೇ ನಮ್ಮ
ದುಃಸ್ಥಿತಿಗೆ ಕಾರಣವೆಂಬ ವಿಚಾರವು ಆಗ ಹೊಳೆಯಿತು
ಆ ಅಭಿಮಾನದ ಅಭಾವವನ್ನು ಹೋಗಲಾಡಿಸುವುದಕ್ಕೆ
ಕರ್ನಾಟಕದ ನಿಜವಾದ ವೈಭವವನ್ನು ಕನ್ನಡಿಗರ ಮುಂದಿ
ಡುವುದೇ ಮದ್ದು ಎಂಬ ಸಿದ್ಧಾಂತಕ್ಕೆ ಬಂದು ತಲುಪಿ
ದೆನು. ಮತ್ತು ಕರ್ನಾಟಕದ ಇತಿಹಾಸವನ್ನು ಅಭ್ಯಾಸ
ಮಾಡುವುದನ್ನು ನನ್ನದೊಂದು ಧ್ಯೇಯವನ್ನಾಗಿ ಇಟ್ಟು
ಕೊಂಡೆನು. ಸುಮಾರು ಹನ್ನೆರಡು ವರ್ಷ ಅಭ್ಯಾಸ ಮಾಡಿ
ದಾಗ ಮಾತ್ರ ಕರ್ನಾಟಕಕ್ಕೂ ಒಂದು ಉಜ್ವಲ
ವಾದ ಇತಿಹಾಸವಿದೆಯೆಂದು ನನಗೆ ಗೊತ್ತಾಯಿತು. ಈ
ನನ್ನ ಅಭ್ಯಾಸದ ಫಲವೇ ನಾನು ಬರೆದ "ಕರ್ನಾಟಕ
ಗತವೈಭವ"ವೆಂಬ ಗ್ರಂಥವು. ಆಗಿನ ಕಾಲದ ಸ್ಥಿತಿಯನ್ನು
ನಾನು ಆ ಗ್ರಂಥಕ್ಕೆ ಬರೆದ ಪ್ರಸ್ತಾವನೆಯಲ್ಲಿ ವರ್ಣಿಸಿರು
ವೆನು. ಅದನ್ನು ಆ ಶಬ್ದಗಳಿಂದಲೇ ಕೊಡುವುದು ಲೇಸು.
ಅಲ್ಲಿ ಹೀಗೆ ಬರೆದಿರುವೆ:

"'ಕರ್ನಾಟಕಮಹಾತ್ಮ್ಯ'ವನ್ನು ಹೊಗಳಿ ಇನ್ನೂ
ಎಚ್ಚರಾಗದಿದ್ದ ತರುಣರನ್ನು ಎಚ್ಚರಿಸಬೇಕೆಂದು ಈ
ಪ್ರಬಂಧವನ್ನು ಕೈಕೊಂಡಿದ್ದೇವೆ.... ಕರ್ನಾಟಕದ ಇತಿ
ಹಾಸದೊಳಗಿನ ಚಿತ್ತಾಕರ್ಷಕವಾದ ಹಲಕೆಲವು ಸಂಗತಿ
ಗಳನ್ನು ಅನೇಕ ಪುಸ್ತಕಗಳಿಂದ ಆರಿಸಿ, ನಮಗೆ ತೋರಿದ
ಕೆಲವು ವಿಧಾನಗಳನ್ನು ಅವುಗಳಲ್ಲಿ ಬೆರಿಸಿ, ಆ ಮಿಶ್ರಣ
ವನ್ನು ಕಾಸಿ, ಕರ್ನಾಟಕದ ಅಭಿಮಾನವೆಂಬ ಎರಕದಲ್ಲಿ
ಕೈಲಾದಷ್ಟುಮಟ್ಟಿಗೆ ಹೊಯ್ದು ಈ ಪ್ರಬಂಧವನ್ನು ರಚಿಸ
ಲಾಗಿದೆ;.... ಇಲ್ಲದ ಸಲ್ಲದ ದೋಷಗಳನ್ನು ಕೇಳಿಕೇಳಿ

ನಮ್ಮ ಕಿವಿಗಳು ಮರಗಟ್ಟಿರುತ್ತವೆ; ಮತಿಯು ಮಸಣಿಸಿದೆ; ಕ್ರಿಯಾಶಕ್ತಿಯು ಕುಗ್ಗಿದೆ. ಮತ್ತು 'ನಾವು ಎಂದಿಗೂ ಹೇಡಿಗಳೇ, ಮುಂದೆಯೂ ಹಾಗೆಯೇ ಉಳಿಯುವವರು' ಎಂಬ ರಾಷ್ಟ್ರವಿಘಾತಕ ಭಾವನೆಯು ನಮ್ಮಲ್ಲಿ ಬೇರೂರಿದೆ. ಅದರಿಂದ ನಾವು ಅಭಿಮಾನಶೂನ್ಯರಾಗಿದ್ದೇವೆ, ಆತ್ಮವಿಶ್ವಾಸವನ್ನು ಕಳೆದುಕೊಂಡಿದ್ದೇವೆ. ಆದುದರಿಂದ 'ನಾವೂ ಮನುಷ್ಯರು; ನಮ್ಮನ್ನೂ ದೇವರೇ ಹುಟ್ಟಿಸಿರುವನು; ನಮ್ಮಿಂದಲೂ ಹಿಂದಕ್ಕೆ ಮಹಾಮಹಾಕಾರ್ಯಗಳು ನೆರವೇರಿವೆ; ನಮಗೂ ಬುದ್ಧಿಯುಂಟು; ಭಾಷೆಯುಂಟು, ರಾಷ್ಟ್ರವುಂಟು, ವೈಭವವುಂಟು; ಇತಿಹಾಸವುಂಟು; ಜಗತ್ತನ್ನು ವ್ಯಾಪಿಸಿದ ಮಹತ್ವದ ತತ್ವವಿಚಾರಗಳು ನಮ್ಮಿಂದಲೇ ಪ್ರಸೃತವಾಗಿವೆ; ನಮ್ಮವರೂ ' ಗಂಗಾವಾರಿಧಿಯೋಳ್ ಆತ್ಮತುರಂಗಮಂ ಮಿಸಿಸಿರ್ದರು;' ನಮ್ಮಲ್ಲಿಯೂ ವಿದ್ವಾಂಸರೂ ವೀರರೂ ಉದಯಿಸಿದರು. "

ಮೇಲಿನ ಅವತರಣಿಕೆಯು ನೋಲಿಂದ, ಆಗಿನ ಕಾಲದಲ್ಲಿ ಕನ್ನಡಿಗರಲ್ಲಿ ಎಷ್ಟು ಕತ್ತಲೆ ಕವಿದಿತ್ತೆಂಬುದು ಗೊತ್ತಾಗುತ್ತದೆ. ಹನ್ನೆರಡು ವರ್ಷ ಇತಿಹಾಸದ ಅಭ್ಯಾಸವನ್ನು ಮಾಡಿ ನಾನು ಕಂಡುಹಿಡಿದುದೆಂದರೆ ಇಷ್ಟೇ. ಅದನ್ನೇ ನಾನು ಗತವೈಭವದ ಪ್ರಸ್ತಾವನೆಯಲ್ಲಿ ಕನ್ನಡಿಗರ ಮನಸಿನಲ್ಲಿ ನಾಟಬೇಕೆಂದು ಮೇಲ್ಕಾಣಿಸಿದಂತೆ ಪ್ರಥಮಾವಿಭಕ್ತಿ ಮೊದಲುಗೊಂಡು ಸಪ್ತಮೀ ವಿಭಕ್ತಿಯ ವರೆಗೆ ಎಲ್ಲ ವಿಭಕ್ತಿಗಳಲ್ಲಿ ರಚಿಸಿದ ವಾಕ್ಯಗಳಿಂದ ಕನ್ನಡಿಗರೆದುರಿಗೆ ಇಟ್ಟೆ. ಆ ಕಾಲಕ್ಕೆ ನಾನು ಇತ್ತ ಶ್ರೀಮದ್ಭಗವದ್ಗೀತೆಯ ಅಭ್ಯಾಸದ

ಲ್ಲಿಯೂ ತೊಡಗಿದ್ದರಿಂದ, ನಾನು ಗೀತೆಯಿಂದ ಪಡೆದ 'ಸ್ಫೂರ್ತಿಯು ಕರ್ನಾಟಕ ಗತವೈಭವ'ವನ್ನು ಗೀತೆಯ ಮಾದರಿಯನ್ನನುಸರಿಸಿ ಬರೆಯಲಿಕ್ಕೆ ನನ್ನನ್ನು ಪ್ರೇರಿಸಿತು. ಅರ್ಜುನನ ಸ್ಥಳದಲ್ಲಿ ಕನ್ನಡಿಗನನ್ನಿಟ್ಟುಕೊಂಡು ಗೀತೆಯ ಕೆಲವು ಅಧ್ಯಾಯಗಳನ್ನು ಕರ್ನಾಟಕಕ್ಕೆ ಅನ್ವಯಿಸಿ ಕೊಂಡು ಬರೆದಿರುವೆನೆಂಬುದು, ಆ ಗ್ರಂಥದ ಮೊದಲಿನ ಕೆಲವು ಪ್ರಕರಣಗಳನ್ನೂ ಕೊನೆಯ ಪ್ರಕರಣವನ್ನೂ ಸೂಕ್ಷ್ಮವಾಗಿ ಓದಿದರೆ ವಾಚಕರಿಗೆ ಗೊತ್ತಾಗುವುದು. ಸಾರಾಂಶ, ಗತವೈಭವವು ಗೀತೆಯ ನಕಲೆಂದರೂ ಒಂದು ರೀತಿಯಿಂದ ಸಲ್ಲುವುದು. ಅದರ ಶ್ರೇಯವು ಗೀತೆಗೆ, ನನಗಲ್ಲ; ಇರಲಿ.

ನಾನು ಆನೆಗೊಂದಿಗೆ ಹೋದದ್ದು ೧೯೦೫ನೆಯ ಇಸ್ವಿಯ ಮೇ ತಿಂಗಳಲ್ಲಿ. ವಂಗಭಂಗ ಚಳವಳಿಯು ಪ್ರಾರಂಭ ವಾದುದು ಅದೇ ವರ್ಷ ಆಗಸ್ಟ ತಿಂಗಳಿನಲ್ಲಿ. ಆ ಚಳ ವಳಿಯಿಂದುದ್ಭವಿಸಿದ ಸ್ವದೇಶೀ ಚಳವಳಿಯು ಮೊದಲು ನನ್ನನ್ನು ರಾಷ್ಟ್ರೀಯನನ್ನಾಗಿ ಮಾಡಿತು. ಈ ಲೇಖ ಬರೆಯುವಾಗ ಕಣ್ಣೆದುರಿಗಿದ್ದ ಉಪಮೆಕೊಡುವುದಾದರೆ ಆನೆಗೊಂದಿ ದರ್ಶನ ಮತ್ತು ಸ್ವದೇಶಿ ಚಳವಳಿ ಇವು ಮುಂಗಾರಿ ಮಳೆಗಳು. ಅವುಗಳಿಂದ ನನ್ನ ಮನೋ ಭೂಮಿಯು ತೊಯ್ದು ಹದಕ್ಕೆ ಬಂದಿತು. ಮತ್ತು ಕೂಡಲೆ ಮೃಗದ ಜಡಿಮಳೆಯು ನನ್ನ ಮನದಲ್ಲಿ ಪ್ರಾರಂಭ ವಾಗಿ, ಒಂದೇ ಸಮನೆ ವಿಚಾರಪರಂಪರೆಗಳಿಗೆ ಆಸ್ಪದ ಕೊಟ್ಟಿತು. ಆಗ ರಾಷ್ಟ್ರೀಯತ್ವದ ಆವೇಶವು ನನ್ನಲ್ಲಿ ಪೂರ್ಣ

ವಾಗಿ ಸೇರಿತು. ಅದು ನನ್ನ ಮನಸಿನಲ್ಲಿ ರಾಷ್ಟ್ರಸೇವೆಯನ್ನು ಮಾಡಬೇಕೆಂಬ ಲವಲವಿಕೆಯನ್ನು ಹುಟ್ಟಿಸಿತು. ಹೀಗೆ ಹುಟ್ಟಿದ ರಾಷ್ಟ್ರೀಯತ್ವದ ಭಾವನೆಗೆ ಆನೆಗೊಂದಿಯ ದರ್ಶನ ದಿಂದ ಹುಟ್ಟಿದ ಸ್ಫೂರ್ತಿಯು ಕರ್ನಾಟಕತ್ವದ ಸ್ವರೂಪವನ್ನು ಕೊಟ್ಟಿತು. ಮತ್ತು ವಂಗಭಂಗವು ನನ್ನ ಕಣ್ಣಿನಲ್ಲಿ ಬಲ ವಾದ ಅಂಜನವನ್ನು ಹಾಕಿ, ಕರ್ನಾಟಕದ ಭಂಗದಕಡೆಗೆ ನನ್ನ ಮನಸ್ಸನ್ನು ಎಳೆಯಿತು. ದೇಶಸೇವೆಯನ್ನು ಮಾಡ ಬೇಕೆಂಬ, ಆನುವಂಶಿಕ ಸಂಸ್ಕಾರದಿಂದ ಬಂದ ಝರಿಗೆ ಹೀಗೆ ಅನೇಕ ಝರಿಗಳು ಕೂಡಿದ್ದ ರಿಂದ ನನ್ನ ಜೀವನ ಪ್ರವಾಹವು ದೊಡ್ಡದಾಗಿ ಅದು "ಕರ್ನಾಟಕ" ಪಾತ್ರೆಯ ಗುಂಟ, ಕರ್ನಾಟಕಪಾತ್ರೆಯು ತುಂಬ ಹರಿಯಹತ್ತಿತು. ಮತ್ತು ನಾನು ಕರ್ನಾಟಕದ ಸೇವೆಯೊಂದನ್ನೇ ಮಾಡಬೇ ಕೆಂಬ ಕೊನೆಯ ನಿರ್ಣಯಕ್ಕೆ ಬಂದು ತಲುಪಿದೆನು.

ಹೀಗೆ ಮಾಡುವಾಗ ನನಗೆ ಕೆಲವು ಹೆಚ್ಚಿನ ಆಕಾಂಕ್ಷೆ ಗಳನ್ನು ಬಿಟ್ಟುಕೊಡಬೇಕಾಯಿತು. ಭಾರತಸೇವೆಯನ್ನು ಮಾಡುವುದು ವ್ಯಾಪಕಸೇವೆಯೆಂಬುದು ನಿಜ. ಕಗ್ಗತ್ತಲೆ ಗವಿದ ಕರ್ನಾಟಕದಲ್ಲಿ ಕೆಲಸಮಾಡುವುದು ಅತ್ಯಂತ ಕಠಿನ ಮತ್ತು ಕಲ್ಲಮೇಲೆ ಕೊಡ ಸುರಿದಂತಾಗಬಹುದೆಂದೂ ಅಂಜಿಕೆ. ಆದರೆ ಎರಡು ಕಾರಣಗಳಿಗೋಸ್ಕರ ನಾನು ಕರ್ನಾಟಕವನ್ನೇ ಆರಿಸಿಕೊಂಡೆ. ಮೊದಲನೆಯ ಕಾರಣ ವೆಂದರೆ ನನ್ನಂಥ ಅಲ್ಪಯೋಗ್ಯತೆಯವನು ತನ್ನ ಜೀವನ ಪ್ರವಾಹವನ್ನು ಭಾರತಸೇವೆಯ ಆ ವ್ಯಾಪಕಕ್ಷೇತ್ರದಲ್ಲಿ ಹರಿ ಬಿಡುವುದರಿಂದ ಪ್ರವಾಹವು ಆಳವಾಗದೆ ತೆಳ್ಳಗಾಗಿಯೂ ಅಗಲವಾಗಿಯೂ ಹರಿಯಬಹುದೆಂದು ಬಗೆದು ಆ ವಿಚಾ

ರವನ್ನು ಬಿಟ್ಟುಕೊಟ್ಟೆನು. ಕೀರ್ತಿಕಾಮಿನಿಯ ಕುಡಿನೋಟ
ಗಳೂ ಕೆಲವೊಮ್ಮೆ ನನ್ನನ್ನು ಭಾರತಸೇವೆಯ ಕಡೆಗೆ ಮನ
ವೊಲಿಸುತ್ತಿದ್ದವು. ಏಕೆಂದರೆ ಭಾರತಸೇವೆಗೆ ಬಲುಬೇಗ
ಕೀರ್ತಿ. ಆದರೆ ಅವುಗಳ ಮೋಹವನ್ನೂ ತೊರೆದೆ. ಮತ್ತು
ಅಚ್ಚುಕೆಚ್ಚಿನ ಕೃತಿ (Solid work) ಆಗಬೇಕಾದರೆ ಕರ್ನಾ
ಟಕವನ್ನಷ್ಟೇ ಕಾರ್ಯಕ್ಷೇತ್ರವನ್ನಾಗಿ ಇಟ್ಟುಕೊಳ್ಳುವುದೇ
ಲೇಸೆಂದು ದೃಢನಿಶ್ಚಯಮಾಡಿ ಅದನ್ನೇ ಧ್ಯೇಯವನ್ನಾಗಿ
ಇಟ್ಟುಕೊಂಡೆ. ಹೆಚ್ಚಿನ ಹವ್ಯಾಸಕ್ಕೆ ಹೋಗಲಿಲ್ಲ. ಇದ
ಕ್ಕಿಂತ ಹೆಚ್ಚಿನ ಕಾರಣವೆಂದರೆ ಕನ್ನಡಿಗರೇ ಕರ್ನಾಟಕದಲ್ಲಿ
ಕಾರ್ಯಮಾಡದಿದ್ದರೆ ಇನ್ನಾರು ಮಾಡುವವರು? ಹಿಂದು
ಳಿದ ಪ್ರಾಂತದಲ್ಲಿ ಕಾರ್ಯಮಾಡುವುದು ಹತ್ತುಪಟ್ಟು ಕಠಿನ
ವೆಂಬುದೇನೋ ನಿಜ. ಆದರೆ ಯಾರಾದರೂ ಒಮ್ಮೆ
ಅದನ್ನು ಕೈಕೊಳ್ಳಲೇಬೇಕಲ್ಲವೆ? ಕನ್ನಡಿಗರಲ್ಲಿ ಈ ಕಲ್ಪನೆ
ಯಿಲ್ಲದ ಮೂಲಕವೇ ಕರ್ನಾಟಕದ ಬುದ್ಧಿಯ ಉಪಯೋ
ಗವು ಕರ್ನಾಟಕಕ್ಕಾಗದೆ, ಅನ್ಯರಿಗಾಗಹತ್ತಿದೆ; ಕರ್ನಾಟ
ಕದ ಹಣದ ಲಾಭವು ಕನ್ನಡಿಗರಿಗೆ ಆಗದೆ ಅನ್ಯರಿಗೆ ಆಗ
ಹತ್ತಿದೆ. ಈ ಬಗೆಯ ವಿಚಾರಗಳೇ ನಾನು ಕರ್ನಾಟಕ
ವನ್ನಷ್ಟೇ ಧ್ಯೇಯವನ್ನಾಗಿ ಇಟ್ಟುಕೊಳ್ಳಲು ಕಾರಣಗಳಾ
ದವು.

ಹೀಗೆ ನಾನು ಕಾರ್ಯಕ್ಷೇತ್ರವನ್ನು ನಿಶ್ಚಯಿಸಿದ ಬಳಿಕ
ನನ್ನ ಮುಂದಿನ, ಮುಂದಿನ ಪ್ರಶ್ನೆಯೆಂದರೆ ಯಾವ ವಿಷಯ
ವನ್ನು ಕೈಕೊಂಡು ಕೆಲಸಮಾಡಬೇಕೆಂಬುದು. ನನಗೆ ನನ್ನ
ಜೀವಿತವು ಪ್ರಾಪ್ತವಾದುದು ಯಾವುದೋ ಒಂದು ವಿಶಿಷ್ಟ
ಉದ್ದೇಶಕ್ಕಾಗಿ ಇದೆ ಎಂಬುದರ ಅರಿವು ಆಗ ಉಂಟಾಗಿ

ತ್ತೇನೋ ಸರಿ. ಆದರೆ, ಆ ವಿಶಿಷ್ಟ ಉದ್ದೇಶವು ಯಾವುದೆಂಬುದರ ಅರಿವು ಆಗ ನನಗಿರಲಿಲ್ಲ. ಒಮ್ಮೆ ವಾಙ್ಮಯಸೇವೆಯನ್ನು ಮಾಡಬೇಕೆಂಬ ಹಂಬಲ ನನ್ನನ್ನು ಹಿಡಿದೆಳೆಯುತ್ತಿತ್ತು; ಮತ್ತೊಮ್ಮೆ ಇತಿಹಾಸ ಸಂಶೋಧಕನಾಗಬೇಕೆಂದು ಹವಣಿಸುತ್ತಿದ್ದೆ; ಮಗದೊಮ್ಮೆ ರಾಜಕಾರಣದ ಪ್ರಚಂಡ ಹೊಳೆಯಲ್ಲಿ ಧುಮುಕಿ ಈಸಬೇಕೆಂಬ ಹುಮ್ಮಸ; ಬೇರೊಮ್ಮೆ ಕರ್ನಾಟಕದ ಏಕೀಕರಣದ ಕಾರ್ಯದಲ್ಲಿ ತೊಡಗಬೇಕೆಂಬ ತಿಂಡಿ; ಇನ್ನೊಮ್ಮೆ ಪ್ರಶಾಂತವಾದ ಧಾರ್ಮಿಕಜೀವನವನ್ನು ಕೈಕೊಳ್ಳಬೇಕೆಂಬ ಲವಲವಿಕೆ. ಈ ಪ್ರಕಾರವಾಗಿ ನಾನಾಧ್ಯೇಯಗಳ ತಾಕಲಾಟದಲ್ಲಿ ತೊಳಲಿದೆ; ಪೀಕಲಾಟಕ್ಕೆ ಒಳಗಾದೆ. ಅವು ನನ್ನನ್ನು ವಿರುದ್ಧ ದಿಶೆಗಳಲ್ಲಿ ಎಳೆಯುತ್ತಿದ್ದವು. ಅವುಗಳ ತಿಕ್ಕಾಟದಲ್ಲಿ, ಮುಕ್ಕಾಟದಲ್ಲಿ, ಕಲಕಾಟದಲ್ಲಿ ಬೆಂದು ಹಣ್ಣಾದೆ. ಕೊನೆಗೆ, ಕರ್ನಾಟಕತ್ವವನ್ನು ಬಲಪಡಿಸುವ ಯಾವತ್ತು ಚಳವಳಿಗಳನ್ನು ಕೈಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದು ತಲುಪಿದೆ. ಕರ್ನಾಟಕದ ಸರ್ವಾಂಗೀಣ ಉನ್ನತಿಗಿಂತ ಹೆಚ್ಚಿನ ಧ್ಯೇಯವನ್ನೂ ಇಟ್ಟುಕೊಳ್ಳಲಿಲ್ಲ. ಕಡಿಮೆ ಧ್ಯೇಯವನ್ನೂ ಇಟ್ಟುಕೊಳ್ಳಲಿಲ್ಲ. "ಸಮಗ್ರ ಕರ್ನಾಟಕದೃಷ್ಟಿ"ಯೇ ನನ್ನ ಯಾವತ್ತು ಚಳವಳಿಗಳನ್ನು ಅಳೆಯುವ ಅಳತೆಗೋಲು. ಆದಕಾರಣ ನನ್ನ ಚಳವಳಿಗಳನ್ನು ಒರೆಗೆಹಚ್ಚುವವರು ಯಾವಾಗಲೂ ಈ ಮಾತನ್ನು ಮರೆಯದಿರಬೇಕು.

ಸಾಮಾನ್ಯವಾಗಿ, ಒಂದೊಂದೇ ಕ್ಷೇತ್ರವನ್ನು ಆಯುಷ್ಯದ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡವರೇ ಬಹಳ ಮಂದಿ. ಒಬ್ಬೊಬ್ಬರಿಗೆ ಒಂದೊಂದು ವಿಷಯದಲ್ಲಿ ಹೆಚ್ಚಿಗೆ

ಅಭಿರುಚಿಯಿರುತ್ತದೆ. ಆದರೆ, ನನಗೆ ಹಾಗೇನೂ ವಿಶಿಷ್ಟವಾದ ಅಭಿರುಚಿ ಇದ್ದಿಲ್ಲ ಲೋಕವಿಲಕ್ಷಣವಾದ ಪ್ರತಿಭೆ ಇಲ್ಲ. ಎಲ್ಲ ವಿಷಯಗಳಲ್ಲಿಯೂ ಸಾಮಾನ್ಯ ಅಭಿರುಚಿ. ಆದಕಾರಣವೇ ದೇವರು ಆ ಕಾಲಕ್ಕೆ ನನ್ನನ್ನು ಕರ್ನಾಟಕದ ರಂಗಭೂಮಿಗೆ ತಂದನೋ ಏನೋ. ಏಕೆಂದರೆ, ನನ್ನ ಅಭಿಪ್ರಾಯದಲ್ಲಿ, ಆಗ ಕರ್ನಾಟಕಕ್ಕೆ ನನ್ನಂಥ ಸಾಮಾನ್ಯ ಮನುಷ್ಯನೇ ಬೇಕಾಗಿದ್ದನು. ಆಗ ಕರ್ನಾಟಕದ ಯಾವ ಅವಯವದಲ್ಲಿಯೂ ಚೈತನ್ಯವಿರಲಿಲ್ಲ. ಚೈತನ್ಯವನ್ನು ಹುಟ್ಟಿಸುವುದೇ ಆಗ ಮಾಡಬೇಕಾದ ಮುಖ್ಯ ಕಾರ್ಯವಾಗಿತ್ತು. ಸಾರಾಂಶ, ಪೂರ್ಣವಾಗಿ ವಿಚಾರಮಾಡಿ, ನನ್ನ ಸ್ವಭಾವ, ನನ್ನ ಯೋಗ್ಯತೆ, ಆಗಿನ ಕಾಲದ ಕರ್ನಾಟಕದ ಪರಿಸ್ಥಿತಿ, ಆಗಿನ ಕಾಲಮಾನ ಇವೇ ಮುಂತಾದವುಗಳನ್ನು ಲಕ್ಷ್ಯದಲ್ಲಿ ತಂದುಕೊಂಡೇ ನಾನು "ಕರ್ನಾಟಕದ ಸರ್ವಾಂಗೀಣ ಉನ್ನತಿ"ಯನ್ನು ನನ್ನ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡಿರುವೆ. ಇದೇ ನನ್ನ ಸಾರ್ವಜನಿಕ ಜೀವನದ ವೈಶಿಷ್ಟ್ಯ.

ನನ್ನ ಸಾರ್ವಜನಿಕ ಜೀವನವು ಅನೇಕರಿಗೆ ಒಂದು ಒಗಟವಾಗಿದೆ. ನಾನು ಯಾವುದೊಂದು ಚಳವಳಿಯನ್ನು ಅಥವಾ ಸಂಸ್ಥೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳದೆ, ಪಾತರಗಿತ್ತಿಯಂತೆ, ಈ ಹೂವಿನಿಂದ ಆ ಹೂವಿಗೆ, ಆ ಹೂವಿನಿಂದ ಈ ಹೂವಿಗೆ ಹಾರುತ್ತಿರುವೆನೆಂದು ಅನೇಕರು ಮೊದಲಿನಿಂದಲೂ ಆಕ್ಷೇಪವೆತ್ತುತ್ತಾರೆ, ಈಗಲೂ ಎತ್ತುತ್ತಿರುವರು. (ಇತ್ತೀಚೆಗೆ ಮಾತ್ರ ಇಂಥವರ ಸಂಖ್ಯೆ ಕಡಿಮೆಯಾಗಿದೆ.) ಆ ಆಕ್ಷೇಪಕ್ಕೆ ನಾನು, ಮೊದಲಿನಿಂದಲೂ ಉತ್ತರಕೊಡು

ತ್ತಲೇ ಬಂದಿರುವೆ. ಆದರೆ, ಇನ್ನೂ, ನನ್ನ ಸಂಗಡ ವಟ್ಟವಾಗಿ ಇರುವವರಿಗೂ ಕೂಡ ಅದರ ಮರ್ಮವು ಪೂರ್ಣವಾಗಿ ಆಕಲನವಾಗಿಲ್ಲ ಆದಕಾರಣ, ಅದು ಮಿಕ್ಕವರಿಗೆ ಆಕಲನವಾಗದಿದ್ದರೆ ಆಶ್ಚರ್ಯವೇನೂ ಅಲ್ಲ. ನಾನು ಅನೇಕ ಕ್ಷೇತ್ರಗಳಲ್ಲಿ ಕೆಲಸಮಾಡಿರುವುದರಿಂದ, ಆಯಾ ಕ್ಷೇತ್ರಗಳಲ್ಲಿದ್ದವರು ನಾನು ಆ ತಮ್ಮ ಕ್ಷೇತ್ರದಲ್ಲಿಯೇ ಆಜೀವ ಕಾರ್ಯಮಾಡಬೇಕೆಂದು ಬಯಸುವುದೂ ಸ್ವಾಭಾವಿಕ. ಮತ್ತು ಆಕ್ಷೇಪವೆತ್ತುತ್ತಿರುವುದೂ ಸಹಜವಾಗಿದೆ. ಸಾರಾಂಶ ನಾನು ಅನೇಕರಿಗೆ ಅನೇಕ ಬಗೆಯಾಗಿ ತೋರುತ್ತಿರುವೆ. ಇದರಲ್ಲಿ, ನನಗೆ ಒಂದೇ ಸಂತೋಷ. ಯಾರೂ ನನ್ನ ಮೇಲೆ ಡಾಂಭಿಕತನದ ಆರೋಪವನ್ನಾಗಲಿ, ಚಂಚಲ ವೃತ್ತಿಯ ಆರೋಪವನ್ನಾಗಲಿ, ಕೂಟನೀತಿಯ ಆರೋಪವನ್ನಾಗಲಿ ಮಾಡುವುದಿಲ್ಲ ನಾನು ಕೈಕೊಂಡ ಕೆಲಸವನ್ನು ಮೈಯುಳಿಸಿಕೊಳ್ಳದೆ, ಇಷ್ಟೇ ಅಲ್ಲ, ಮೈಮರೆತು ಮೈನುಗ್ಗು ಮಾಡಿಕೊಂಡು ಯಾತರ ಪರಿವೆಯನ್ನೂ ಯಾರ ಪರಿವೆಯನ್ನೂ ಹಿಡಿಯದೆ ಮಾಡುವ ಸ್ವಭಾವದವನೆಂಬುದೂ ಜನರಿಗೆ ಗೊತ್ತು ಇದಕ್ಕಿಂತ ಬೇರೆ ಹಾದಿ ಹಿಡಿದಿದ್ದರೆ ಒಳಿತಾಗುತ್ತಿತ್ತೆಂದು ಕನಿಕರಪಡುವವರೇ ಬಹಳ ಜನ. ಅವರ ಅಂಬೋಣದರಲ್ಲಿ ತಥ್ಯಾಂಶವೇನೂ ಇಲ್ಲವೆಂದೂ ನಾನು ಹೇಳುವುದಿಲ್ಲ ಮೇಲೆ ಮೇಲೆ ನೋಡುವವರಿಗೆ ನನ್ನ ಜೀವನವು ಹಾಗೆ ವಿರೋಧಾಭಾಸದಿಂದ ಕಾಣುವುದೇನೂ ಸುಳ್ಳಲ್ಲ ಆದರೆ ನಾನು ಹೇಳುವುದಿಷ್ಟೇ, ಈ ಆಕ್ಷೇಪಗಳನ್ನು ಮುಂಚೆಯೇ ಸಂಪೂರ್ಣವಾಗಿ ಯೋಚಿಸಿ ಈ ಮಾರ್ಗವನ್ನು ಬುದ್ಧಿಪುರಸ್ಸರವಾಗಿ ಕೈಕೊಂಡಿದ್ದೇನೆ.

ಕರ್ನಾಟಕದ ಸರ್ವಾಂಗೀಣ ಉನ್ನತಿಯೇ ನನ್ನ ಧ್ಯೇಯವಾಗಿರಬೇಕೆಂಬುದು ನನ್ನ ವಿಚಾರಪೂರ್ವಕವಾದ ಶ್ರದ್ಧೆ (Conviction); ಆತ್ಮವಿಶ್ವಾಸ. ಅದರ ತಪ್ಪುಒಪ್ಪುಗಳಿರಡಕ್ಕೂ ನಾನು ಹೊಣೆಗಾರನು.

ನಿಜವಾಗಿ ನಾನಾದರೂ ಕೈಕೊಂಡದ್ದು ಒಂದೇ ಒಂದು ವಿಷಯವಲ್ಲವೇ? ಅಹುದು. ಆದರೆ, ಅದು ಅತ್ಯಂತ ವ್ಯಾಪಕವಾದುದೆಂದೂ ಅಂಥ ವ್ಯಾಪಕವಾದ ಧ್ಯೇಯವನ್ನಿಟ್ಟುಕೊಳ್ಳುವುದು "ನಾನು ಭಾರತದ ಸಂಪೂರ್ಣ ಸೇವೆಮಾಡುತ್ತೇನೆ"ಂದು ಅನ್ನುವಂತೆ ಹುಚ್ಚುತನವೆಂದೂ ಕೆಲವರ ಅಭಿಪ್ರಾಯ. ನನ್ನ ಬಾಲಮಿತ್ರರಾದ ಕೈ. ಬಳವಂತರಾವ ಜರಾರ ಇವರಿಗೂ ನನಗೂ ಈ ವಿಷಯದಲ್ಲಿ ಒಮ್ಮೆ ಮಾತುಕಥೆಯಾಯಿತು. ಅವರೂ ಮುಂಚೆ ಮಿಕ್ಕವರ ಆಕ್ಷೇಪವನ್ನೆತ್ತಿದ್ದರು. ನಾನು ಅವರ ಗುಟ್ಟನ್ನು ಬಿಡಿಸಿ ಹೇಳಿದಾಗ, ಅದು ಅವರಿಗೆ ಮನವರಿಕೆಯಾಯಿತು. ಆದರೆ, ಇಷ್ಟು ವ್ಯಾಪಕವಾದ ಧ್ಯೇಯವನ್ನು ಇಟ್ಟುಕೊಂಡು ಕೆಲಸಮಾಡಲಿಕ್ಕೆ ನೀನೇನು ಜಸ್ಟಿಸ್ ರಾನಡೆ ಎಂದು ತಿಳಿದಿರುವಿಯೊ, ಎಂದು ಉಪರೋಧಿಸಿದರು. ಅದಕ್ಕೆ ನಾನು, "ನಾನು ರಾನಡೆಯಿರಲಿ ಬಿಡಲಿ, ಕರ್ನಾಟಕಕ್ಕೆ ಈಗಿನ ಕಾಲಕ್ಕೆ ಆ ತರಹದಿಂದ ಕಾರ್ಯಮಾಡುವವರು ಬೇಕಾಗಿದ್ದಾರೆ ಎಂದು ಮಾತ್ರ ಹೇಳಬಲ್ಲೆನು" ಎಂದು ಉತ್ತರ ಕೊಟ್ಟೆನು.

ಸ್ವಲ್ಪ ವಿಚಾರಮಾಡಿ ನೋಡಿದರೆ, ನಾನು ಕೈಕೊಂಡ ಮಾರ್ಗವೂ ನಾನು ಮಾಡಿದ ಚಿಕಿತ್ಸೆಯೂ ಆಗಿನ ಕಾಲಕ್ಕೆ ಸರಿಯಾದುವೇ ಇದ್ದವೆಂಬುದು ಸಹಜವಾಗಿ ಗೊತ್ತಾಗುವುದು. ಕರ್ನಾಟಕವೆಂಬುದೇ ಅಸ್ತಿತ್ವದಲ್ಲಿ ಇಲ್ಲದಾಗ,

ಅದಕ್ಕೆ ಅಸ್ತಿತ್ವವನ್ನು ತಂದುಕೊಡುವುದೇ ಮುಖ್ಯ ಕೆಲಸ ವಲ್ಲವೇ? ಏನೋ ಮತ್ತು ಯಾವುದೋ ಒಂದು ಅಂತಃ ಸ್ಫೂರ್ತಿಯಿಂದಲೋ ಧಾರವಾಡದಲ್ಲಿಯ ವಿದ್ಯಾವರ್ಧಕ ಸಂಘಕ್ಕೆ ಅದರ ಸ್ಥಾಪಕರು "ಕರ್ನಾಟಕ ವಿದ್ಯಾವರ್ಧಕ ಸಂಘ"ವೆಂದು ಹೆಸರು ಇಟ್ಟರು. ಆದರೆ, ನಿಜವಾಗಿ ಕರ್ನಾಟಕದ ಸ್ಪಷ್ಟವಾದ ಕಲ್ಪನೆ ಆಗ ಇರಲಿಲ್ಲ ಮರಾಟಿ ಗರಿಗೆ ಮರಾಟಿಯ ಅಭಿಮಾನವಿದ್ದಂತೆ ನಮಗೂ ಕನ್ನಡ ನುಡಿಯಃ ಅಭಿಮಾನವಿರಬೇಕೆಂಬುದೊಂದೇ ವಿಚಾರವು ಅದರಲ್ಲಿ ಮಿಂಚುತ್ತಿತ್ತು. ಸಾರಾಂಶ, ನನ್ನ ಅಭಿಪ್ರಾಯ ದಲ್ಲಿ ಆಗ, 'ಕರ್ನಾಟಕ'ವು ಗರ್ಭಾವಸ್ಥೆಯಲ್ಲಿತ್ತು. ಅದಕ್ಕೆ ಇನ್ನೂ ಸ್ಪಷ್ಟವಾದ ಅವಯುವಗಳು ಹುಟ್ಟಿದ್ದಿಲ್ಲ. ಅದೊಂದು ಅಸ್ಪಷ್ಟವಾದ ಮುದ್ದೆಯಾಗಿತ್ತು. ಕರ್ನಾಟಕದ ಕೂಸನ್ನು ಹಡೆಯಬೇಕಾದರೆ, ಅದು ಜೀವಂತವಾಗಿ ಹೊರಬೀಳಬೇ ಕಾದರೆ, ಆ ಗರ್ಭಪಿಂಡ (Fœtus)ದಲ್ಲಿ ಅವಯುವಗಳೆಲ್ಲವೂ ಒಡಮೂಡಿರಬೇಕಲ್ಲವೆ? ಅವುಗಳಲ್ಲಿ ಕರ್ನಾಟಕತ್ವದ ಜೀವವು ಸಂಚಾರವಾಗುತ್ತಿರಬೇಕಲ್ಲವೆ? ಆದಕಾರಣ, ಕರ್ನಾಟಕಕ್ಕೆ ಹಾಗೆ ಸರ್ವಾವಯುವಗಳನ್ನು ಹುಟ್ಟಿಸಿ, ಸಂಜೀವನವಾಗಿ ಮಾಡುವುದೇ ಆಗಿನ ಮುಖ್ಯ ಕೆಲಸ ವಾಗಿತ್ತು. ಆ ಶ್ರದ್ಧೆಯಿಂದಲೇ ನಾನು ಆ ಧ್ಯೇಯವನ್ನು ಕೈಕೊಂಡೆ.

ಕರ್ನಾಟಕಕ್ಕೆ ಸಂಜೀವಿನೀ ಮಾತ್ರೆಯನ್ನು ಕೊಡುವ ಮುಂಚೆ ನಾನು ನನ್ನಲ್ಲಿ ಅವೆಲ್ಲ ಅವಯುವಗಳನ್ನು ಹುಟ್ಟಿಸಿ ಕೊಳ್ಳಬೇಕಲ್ಲವೆ? ಆದಕಾರಣ, ನಾನು ಮುಂಚೆ ಆ ಅವ ಯುವಗಳನ್ನು ನನ್ನಲ್ಲಿ ಹುಟ್ಟಿಸಿಕೊಂಡೆ. ಆಗ ಕರ್ನಾಟ

ಕವೂ ಡಾರ್ವಿನ್‌ನ ಏಕಾವಯವ ( Amœba ) ಪ್ರಾಣಿ ಯಾಗಿತ್ತು; ನಾನೂ ಅದರಂತೆಯೇ ಏಕಾವಯವ ಪ್ರಾಣಿ ಯಾಗಬೇಕಾಯಿತು ಅಂದರೆ ನಾನೊಬ್ಬನೇ ಸರ್ವಕ್ಷೇತ್ರ ಗಳಲ್ಲಿ ಕೆಲಸಮಾಡಬೇಕಾಯಿತು. ಈ ಗರ್ಭದ ಉಪ ಮೆಯನ್ನು ಕೊಟ್ಟು ನಾನು ನನ್ನ ಅನೇಕ ಆಕ್ಷೇಪಕರನ್ನು ಸಮಾಧಾನಪಡಿಸುತ್ತ ಬಂದಿರುವೆ. ೧೯೧೪ನೆಯ ಇಸ್ವಿಯಲ್ಲಿ ಪುಣೆಗೆ ಡೆಕ್ಕನ ಕಾಲೇಜಿನಲ್ಲಿ ಇಂಗ್ಲಿಷ ವ್ಯಾಖ್ಯಾನ ಕೊಡ ಲಿಕ್ಕೆ ಹೋದಾಗ, ರುಕ್ಮಾಂಗದ ಪೇಠವಾಂಡ ಮುಂತಾದ ಅನೇಕ ಕಿರಿಯರು ನನ್ನ ಮೇಲೆ ಇದೇ ಆಕ್ಷೇಪವನ್ನೆತ್ತಿ ದ್ದರು. ಅವರಿಗೆ ಇದೇ ಉತ್ತರ ಕೊಟ್ಟು ಸಮಾಧಾನಪಡಿ ಸಿದೆ.

ಈ ರೀತಿಯಾಗಿ, ಅನೇಕ ಕ್ಷೇತ್ರಗಳಲ್ಲಿ ಕೆಲಸಮಾಡು ವುದರಿಂದ ಯಾವ ಕೆಲಸವೂ ತೃಪ್ತಿಕರವಾಗಿ ಆಗುವುದಿಲ್ಲ ವೆಂಬುದನ್ನು ನಾನು ಬಲ್ಲೆ. ಆದರೆ ಯಾವುದೊಂದು ಕೆಲಸವನ್ನು ಸಂಪೂರ್ಣವಾಗಿ ಕೊನೆಗಾಣಿಸುವ ಧ್ಯೇಯ ವನ್ನೇ ನಾನು ಇಟ್ಟುಕೊಂಡಿಲ್ಲ ಯಾವುದೊಂದೇ ಸಂಸ್ಥೆಗೆ ಕಡೆತನಕ ಅಂಟಿಕೊಂಡಿರಬೇಕೆಂಬ ವಿಚಾರವನ್ನೇ ನಾನು ಮಾಡಲಿಲ್ಲ ನನ್ನಿಂದ, ನನಗೆ ಕೂಡ ಸಮಾಧಾನಕಾರಕ ವಾಗುವಂಥ ಕೆಲಸ ಮಾಡುವುದಾಗದಿದ್ದರೂ ನನ್ನ ಧ್ಯೇಯ ವನ್ನು ಧ್ರುವನಕ್ಷತ್ರದಂತೆ ನನ್ನ ಮುಂದಿಟ್ಟುಕೊಂಡು, ಅದರ ಕಡೆಗೆ ಸಾಗುವುದಕ್ಕೆ ನನ್ನ ಕೈಲಾದ ಮಟ್ಟಿಗೆ ಅಂತಃಕರಣಪೂರ್ವಕವಾಗಿ ಪ್ರಯತ್ನಿಸಿರುವೆನೆಂದು ಮಾತ್ರ ಧೈರ್ಯದಿಂದ ಹೇಳಬಲ್ಲೆ. ಹಾಗೆ ಅರಗಚ್ಚು(ಅರ್ಧ ಕಚ್ಚು) ಕೆಲಸದಲ್ಲಿಯೇ ನನಗೊಂದು ಸಮಾಧಾನವಿದೆ. ಇದರಿಂದ

ನಾನು ಕಾರ್ಯಮಾಡಿದ್ದರ ಮುಖ್ಯ ಧೋರಣವು ಯಾವು ದೆಂಬುದು ವಾಚಕರ ಲಕ್ಷ್ಯಕ್ಕೆ ಬಂದಿರಬಹುದು. ಕರ್ನಾಟಕವು ನನ್ನ ಭೂಮಿ. ಆ ಭೂಮಿಯಲ್ಲಿ ರಾಜಕಾರಣ, ವಾಙ್ಮಯ, ಇತಿಹಾಸ ಮುಂತಾದವು ಅನೇಕ ಹೊಲಗಳು. ಯಾವ ಕಾಲಕ್ಕೆ ಯಾವ ಹೊಲಕ್ಕೆ ಮಳೆಯಾಗಿ ಬಿತ್ತುವ ಹದ ಬರುತ್ತದೋ ಆ ಕಾಲಕ್ಕೆ ಅದರಲ್ಲಿ ಕರ್ನಾಟಕತ್ವದ ಬೀಜಗಳನ್ನು ಬಿತ್ತುವುದು ನನ್ನ ಕಾರ್ಯ ಮಾಡುವುದರ ಮುಖ್ಯ ಧೋರಣ.

ಆದರೆ, ಕರ್ನಾಟಕಕ್ಕಾಗಿ ಕಾರ್ಯಮಾಡುವಾಗ ರಾಷ್ಟ್ರೀಯತ್ವವನ್ನೆಂದಿಗೂ ಕಣ್ಮರೆ ಮಾಡಿಲ್ಲ ನನಗೆ ಅವೆರಡರಲ್ಲಿ ವಿರೋಧವೇ ಕಾಣುವುದಿಲ್ಲ. ನನಗೆ ಕರ್ನಾಟಕ ವೆಂದರೆ ಅದೊಂದು ಕಿರಣಕೇಂದ್ರದ ಕಾಜು ( Focussing lens). ಅದರೊಳಗಿಂದ ನನಗೆ ಭರತಭೂಮಿ ಮಾತ್ರವೇ ಏಕೆ ಇಡೀ ವಿಶ್ವವೇ ಕಾಣುತ್ತದೆ. ವಿಶ್ವದ ಕಿರಣಗಳೂ ಭಾರತದ ಕಿರಣಗಳೂ ನನ್ನ ಕರ್ನಾಟಕದಲ್ಲಿ ಕೇಂದ್ರೀಕೃತವಾಗಿವೆ; ಅಂತರ್ಯಾಮಿಯಾಗಿವೆ. ಕರ್ನಾಟಕದ ದಿವ್ಯದೃಷ್ಟಿಯು ಆ ಕಿರಣಗಳನ್ನು ಕಾಣಬಹುದು. ಅದೊಂದು ಕಿಡಿಕಿಯು. ಜಯಕರ್ನಾಟಕದ ೧ನೆಯ ವರ್ಷದ ೧ನೆಯ ಸಂಚಿಕೆಯಲ್ಲಿಯ "ಪರಮಾತ್ಮ ಪ್ರೇರಣೆ, ಆತ್ಮನಿವೇದನ"ವೆಂಬ ೧ನೆಯ ಲೇಖವಲ್ಲಿ ನಾನು ಇದನ್ನೇ ಕೆಳಗಿನ ಶಬ್ದಗಳಲ್ಲಿ ಹೇಳಿರುವೆನು.

"ಕರ್ನಾಟಕವೇ ನಮ್ಮ ಕರ್ಮಭೂಮಿ....ಮಹಾಮಹಿಮರ ಪಾದಧೂಳಿಯಿಂದ ಪುನೀತವಾದ ಭೂಮಿಯಲ್ಲವೆ ?

ಇಂತಹ ಚಾರುತಮವಾದ ಭೂಮಿಯನ್ನು ಭರತಖಂಡದ ನಿರ್ಜೀವವಾದ ಭಾಗವನ್ನಾಗಿ ಇಡುವುದಕ್ಕೆ ಯಾವ ಭಾರತೀಯನು ಒಪ್ಪುವನು ? ಆದುದರಿಂದ, ಕನ್ನಡಿಗರೆಲ್ಲರೂ ಇವಳ ಪುನರುಜ್ಜೀವನಕ್ಕಾಗಿ ಯತ್ನಿಸಬೇಕೆಂಬುದೇ ನಮ್ಮ ಉದ್ದೇಶ.

ಹೀಗೆ ನಮ್ಮ ಕಾರ್ಯಕ್ಷೇತ್ರವು ಕರ್ನಾಟಕವಾದರೂ ಭರತಭೂಮಿಯೇ ಧರ್ಮಕ್ಷೇತ್ರವು. ಕನ್ನಡ ನುಡಿಯೂ ನಾಡೂ ನಮ್ಮ ನಡು-ಮನೆಯಾದರೂ, ವಿಶ್ವವೆಂಬೀ ಪಗಡೆ ಪಟದಲ್ಲಿ ಭರತಭೂಮಿಯೇ ನಮ್ಮ ಕಟ್ಟಿಯ ಮನೆಯೆಂಬುದನ್ನು ನಾವು ಮರೆತಿಲ್ಲ....

....ಭರತಭೂಮಿಯು ಹೇಗೆ ಇಡೀ ವಿಶ್ವದ ಉತ್ಸವ ಮೂರ್ತಿಯೊ ಹಾಗೆ ಈ ಕರ್ನಾಟಕವು ಭರತಖಂಡದ ಉತ್ಸವಮೂರ್ತಿಯು ............ ಏವಂಗುಣವಿಶಿಷ್ಟವಾದ ಕರ್ನಾಟಕವೇ ಕನ್ನಡಿಗರ ಇಷ್ಟದೇವತೆ, ಭಾರತಮಾತೆಯ ಚಿಕ್ಕ ಪ್ರತಿಮೆ."

ಸಾರಾಂಶ, ನನ್ನ ಕಣ್ಣೆದುರಿಗಿರುವ ಉಪಮೆಯಲ್ಲಿ ಹೇಳಬೇಕಾದರೆ, ಆನೆಗೊಂದಿಯ ದರ್ಶನವು ಅಡಿಹಾಕಿದ ನನ್ನ ಜೀವನದ ಮಾವು ೪-೫ ತಿಂಗಳಲ್ಲಿ ಹಣ್ಣಾಯಿತು. ಇನ್ನು ಮುಂದೆ, ನಾನು ಕಾರ್ಯಮಾಡಿದ ವಿವಿಧಕ್ಷೇತ್ರಗಳು ಯಾವುವು, ಅವುಗಳಲ್ಲಿ ನಾನು ಮಾಡಿದ ಕಾರ್ಯವಾವುದು, ಮಾಡದೆ ಉಳಿದ ಕಾರ್ಯವಾವುದು ಇವೇ ಮುಂತಾದವು

ಗಳ ಸಂಬಂಧದ ನನ್ನ ಸ್ಮೃತಿಗಳನ್ನು, ಹಿಂದಿನಂತೆ ಕಾಲ ಕ್ರಮವಾಗಿ ಕೊಡದೆ, ವಿಷಯಾನುಕ್ರಮವಾಗಿ ಕೊಡುತ್ತ ಹೋಗುವೆ.

ಇಲ್ಲಿಗೆ ನನ್ನ ಜೀವನದಲ್ಲಿಯ ಒಂದನೇ ಅಂಕವು ಸಮಾಪ್ತಿಯಾಯಿತು.

ಶ್ರೀ ಕೃಷ್ಣಾರ್ಪಣಮಸ್ತು.



